# ಹಿನ್ ನೆಲೆ

ಇದೊಂದು ಚಿಕ್ಕ ಕಾದಂಬರಿ. ಇದರ ಕಥಾವಸ್ತು ಕರ್ನಾಟಕದ ಚರಿತ್ರೆಯಲ್ಲಿಯ ಒಂದು ಪ್ರಸಿದ್ಧ ಘಟನೆಯ ಸುತ್ತಲು ಹಬ್ಬಿಕೊಂಡಿದೆ. ಈ ಘಟನೆಯೋ ಚಾಲುಕ್ಯ ರಾಜ್ಯ ಪುನಃಸ್ಥಾಪಕನಾದ ತೈಲಪನು ಗೋದಾವರೀ ಸಂಗ್ರಾಮದಲ್ಲಿಮಾಳವ ದೇಶದ ಪರಮಾರ ವಂಶದ ಮುಂಜ ರಾಜನ ಮೇಲೆ ಜಯುವನ್ನು ಸಂಪಾದಿಸಿ ಆತನನ್ನು ಸೆರೆ ಹಿಡಿದುದು. ಅನಂತರ ಮುಂಜನು ತೈಲಪನ ಬಂಧನದಿಂದ ತಪ್ಪಿಸಿಕೊಂಡು ಹೋಗಲು ಹವಣಿಸಿ ಮರಣಕ್ಕೆ ಗುರಿಯಾಗುತ್ತಾನೆ. ತೈಲಪನು ಜಯಶೀಲನಾಗಿ ಕರ್ನಾಟಕದ ಉತ್ತರ ಭಾರತೀಯ ದಿಗ್ವಿಜಯಗಳಿಗೆ ಮಾರ್ಗದರ್ಶಕನಾಗುತ್ತಾನೆ.

ಈ ಕಾದಂಬರಿಯನ್ನು ಬರೆಯುವಾಗ ಕರ್ನಾಟಕ ಮತ್ತು ಮಾಳವದ ಚರಿತ್ರೆಗೆ ಸಂಬಂಧಿಸಿದ ಹಲವಾರು ಸಾಧನಗಳನ್ನು ಅಭ್ಯಾಸ ಮಾಡಿ ಅವುಗಳನ್ನು ಉಚಿತ ಪ್ರಮಾಣದಲ್ಲಿ ಉಪಯೋಗಿಸಿಕೊಂಡಿದ್ದೇನೆ. ಕಾದಂಬರೀಕಾರನ ಸ್ವಾತಂತ್ರ್ಯವನ್ನು ಬಳಸಿಕೊಂಡು ಕಥಾರಚನೆ, ಪಾತ್ರನಿರೂಪಣೆ, ಮೊದಲಾದ ಅಂಶಗಳಲ್ಲಿ ಕೆಲವಾರು ಮಾರ್ಪಾಟಗಳನ್ನು ಮಾಡಿಕೊಂಡಿದ್ದೇನೆ.

ಇದರಲ್ಲಿ ಮೂಡಿರುವ ಕರ್ನಾಟಕದ ಚಿತ್ರವು ಕರ್ನಾಟಕದ ದೃಷ್ಟಿಯಿಂದ ರೂಪಿತವಾದುದು. ಈ ಘಟನೆಯನ್ನು ಕುರಿತು ಕನ್ನಡಿಗರಲ್ಲದ ಬೇರೆಯವರು ಇದುವರೆಗೆ ಲೇಖನಸೃಷ್ಟಿಯನ್ನು ಮಾಡಿದ್ದಾರೆ. ಕರ್ನಾಟಕದ ದೃಷ್ಟಿಯಿಂದ ಈ ವಿಷಯವನ್ನು ಪರಾಮರ್ಶಿಸಿ, ಸಮರ್ಪಕವಾದ ರೀತಿಯಲ್ಲಿ ಕನ್ನಡಿಗರಾರೂ ಇದನ್ನು ವಿವೇಚಿಸಿದಂತೆ ತೋರಲಿಲ್ಲ. ಅದಕ್ಕಾಗಿ ಇಂತಹ ರಚನೆಯ ಆವಶ್ಯಕತೆ ಇದೆಯೆಂದು ನನಗೆ ಬಹುವಾಗಿ ಅನಿಸಿತು. ಈ ಕೊರತೆಯನ್ನು ಮನದಂದು ನಾನೀ ಪ್ರಯತ್ನಕ್ಕೆ ಕೈ ಹಾಕಿದ್ದೇನೆ.

ತೈಲಪ ಮತ್ತು ಮುಂಜ ಇವರ ಹೋರಾಟದ ಘಟನೆಗಳು ನಡೆದು ಹೋಗಿ ಅನೇಕ ಶತಮಾನಗಳು ಗತಿಸಿದ ಬಳಿಕ ಮೇರುತುಂಗಾಚಾರ್ಯ,[೧]

೧ ಮೇರುತುಂಗಾಚಾರ್ಯನ ಕಾಲ ೧೪ನೆಯ ಶತಮಾನ. ಮಿಕ್ಕವರು ಇನ್ನೂ ಈಚಿಯ ಕಾಲದವರಾಗುತ್ತಾರೆ; A. B. Kieth's A History of Sanskrit Literature, P. 292.

ರಾಜವಲ್ಲಭ, ಶುಭಶೀಲ, ಮೊದಲಾದ ಔತ್ತರೇಯ ಸಂಸ್ಕೃತ ಪ್ರಬಂಧಕಾರರು ಪ್ರಬಂಧಚಿಂತಾಮಣಿ, ಭೋಜಚರಿತ, ಭೋಜಪ್ರಬಂಧ, ಮೊದಲಾದ ಗ್ರಂಥಗಳಲ್ಲಿ ಈ ವಿಷಯಗಳನ್ನು ವರ್ಣಿಸುತ್ತ ತಮಗೆ ತಿಳಿದಂತೆ ಬಣ್ಣವನ್ನು ಬಳಿದಿದ್ದಾರೆ. ಇಂತಹ ವರ್ಣನೆಗಳಿಂದ ಕರ್ನಾಟಕ ಮತ್ತು ಕರ್ನಾಟಕ ರಾಜನ ವಿಚಾರದಲ್ಲಿ ಅನ್ಯಪ್ರಾಂತಗಳಲ್ಲಿ ವಿಕೃತ ಅಭಿಪ್ರಾಯ ಮತ್ತು ಕುತ್ಸಿತ ಭಾವನೆಗಳು ಹುಟ್ಟಿ ಬೆಳೆಯಲು ಕಾರಣವಾಗಿದೆ.

ಮೇಲೆ ಹೆಸರಿಸಿದ ಗ್ರಂಥಗಳಲ್ಲಿಯ ಕೆಲ ವಿಪರ್ಯಸ್ತ ವಿಧಾನಗಳನ್ನು ಉದಾಹರಣರೂಪವಾಗಿ ಇಲ್ಲಿ ಎತ್ತಿ ತೋರಿಸಬಹುದು:

೧. ಮೇರುತುಂಗಾಚಾರ್ಯನ ಪ್ರಬಂಧಚಿಂತಾಮಣಿಯಲ್ಲಿಯ ಮುಂಜರಾಜಪ್ರಬಂಧ ಎಂಬ ಕಥೆಯಲ್ಲಿ ತೈಲಪನನ್ನು ತೈಲಿಪ ಎಂದು ಹೆಸರಿಸಿದೆ. ಆತನು ತಿಲಿಂಗ ದೇಶದ ಎಂದರೆ ತೆಲುಗು ಸೀಮೆಯ ರಾಜನೆಂದು ವರ್ಣಿಸಿದೆ.[೨] ಇದರಿಂದ ಈ ಗ್ರಂಥಕಾರನಿಗೆ ಕರ್ನಾಟಕ ವಿಷಯದಲ್ಲಿ ಎಷ್ಟರ ಮಟ್ಟಿಗೆ ಯಥಾರ್ಥ ಜ್ಞಾನವಿದ್ದಿತೆಂಬುದು ವಿಶದವಾಗುತ್ತದೆ.

೨. ಅದೇ ಗ್ರಂಥದಲ್ಲಿ ಮುಂದೆ ತೈಲಪನ ತಂಗಿಯಾದ ಮೃಣಾಲವತಿಗೂ ಆತನ ಸೆರೆಯಲ್ಲಿದ್ದ ಮುಂಜರಾಜನಿಗೂ ಪ್ರಣಯ ಸಂಬಂಧವು ಉಂಟಾಯಿತೆಂದು ಹೇಳಿ, ಬಳಿಕ ಆಕೆ ಮಾಡಿದ ವಿಶ್ವಾಸಘಾತದಿಂದ ಮುಂಜನು ದಾರುಣ ಮರಣಕ್ಕೆ ಈಡಾಗುವನೆಂದು ನಿರೂಪಿಸಿದೆ.[೩] ಇದು ಅನುಚಿತವೂ ಅಸ್ವಾಭಾವಿಕವೂ ಆಗಿದೆ.

೩. ಶುಭಶೀಲನ ಭೋಜಪ್ರಬಂಧದಲ್ಲಿ[೪] ಮೃಣಾಲವತಿಯ ಕುಲಗೋತ್ರವನ್ನು ಹೀಗೆ ವಿವರಿಸಿದೆ: ತೈಲಪನ ತಂದೆ ದೇವಲನೆಂಬ ರಾಜ. ಈತನು ಸುಂದರಿಯೆಂಬ ತನ್ನ ದಾಸಿಯನ್ನು ಪತ್ನೀಸ್ಥಾನದಲ್ಲಿ ಇರಿಸಿದುದರ ಫಲವಾಗಿ ಮೃಣಾಲವತಿ ಜನಿಸಿದಳು. ಮೃಣಾಲವತಿಯನ್ನು ಶ್ರೀಪುರದ

---

೨ ಮೇರುತುಂಗಾಚಾರ್ಯಕೃತ ಪ್ರಬಂಧಚಿಂತಾಮಣಿ(ಮುಂಬಯಿ,೧೯೩೨), ಪುಟ ೩೩.

೩ ಅದೇ, ಪು. ೩೪–೩೭.

೪ ಅದೇ, ಪು. ೩೪, ಟಿಪ್ಪಣಿ ೧.

ಚಂದ್ರನೆಂಬ ರಾಜನಿಗೆ ಕೊಟ್ಟಿದ್ದಿತು. ಆ ರಾಜನ ಮರಣಾನಂತರ ಈಕೆ ವಿಧವೆಯಾದಳು. ಈ ವಿವರಗಳು ಇತಿಹಾಸವಿರೋಧಿಯಾಗಿವೆ. ಮಾತ್ರ ವಲ್ಲದೆ ಸ್ವಕಪೋಲಕಲ್ಪಿತವೂ ಕುತ್ಸಿತ ವೃತ್ತಿಯ ದ್ಯೋತಕವೂ ಆಗಿವೆ. ದೇವಲನು ತೈಲಪನ ತಂದೆಯೆಂಬುದು ಅಪೂರ್ವ ವಿಷಯ!

೪. ರಾಜವಲ್ಲಭನ ಭೋಜಚರಿತದಲ್ಲಿಯ ಕೆಲ ವಿಷಯುಗಳು ಹೀಗಿವೆ: ಮುಂಜರಾಜನ ತರುವಾಯ ಭೋಜನು ಮಾಳವ ರಾಜ್ಯದ ಅಧಿಪತಿ ಯಾದನು. ಆತನು ಒಂದು ದಿನ ತನ್ನ ಆಸ್ಥಾನದಲ್ಲಿ, ತೈಲಪನು ಮುಂಜ ರಾಜನನ್ನು ಚಿತ್ರವಧೆ ಮಾಡಿದ ಸಂಗತಿಯನ್ನು ಚಿತ್ರಿಸುವ ನಾಟಕವನ್ನು ಅವಲೋಕಿಸಿದನು. ಇದರಿಂದ ಕ್ಷುಬ್ಧನಾದ ಭೋಜನು ತೈಲಪನ ಸೇಡನ್ನು ತೀರಿಸಲು ನಿಶ್ಚಯಿಸಿದನು. ಭೋಜನು ತೈಲಪನ ಮೇಲೆ ದಂಡಯಾತ್ರೆ ಯನ್ನು ಕೈಕೊಂಡು ಆತನನ್ನು ಬಂಧಿಸಿದನು. ತೈಲಪನು ಮುಂಜನಿಗೆ ವಿಧಿ ಸಿದ ಚಿತ್ರಹಿಂಸೆಯನ್ನು ತೈಲಪನಿಗೆ ವಿಧಿಸಿ ಆತನನ್ನು ಕೊಲ್ಲಿಸಿದನು. ಈ ವರ್ಣನೆ ನಿರಾಧಾರವೂ ಇತಿಹಾಸಕ್ಕೆ ಪ್ರತಿಕೂಲವೂ ಆಗಿದೆಯೆಂದು ದಿವಂಗತ ರಾ. ಗೋ. ಭಾಂಡಾರಕರರು ತೋರಿಸಿದ್ದಾರೆ. ೫

ಈ ಮೇರೆಗೆ ಮೇಲೆ ನಿರ್ದೇಶಿಸಿದ ಸಂಸ್ಕೃತ ಪ್ರಬಂಧಕಾರರ ಲೇಖನ ಗಳನ್ನು ಪರೀಕ್ಷಿಸಿದರೆ ಅವು ಚಿಕಿತ್ಸಕ ಬುದ್ಧಿಯಿಂದ ಬರೆದುವು ಅಲ್ಲವೆಂದೂ ವಿಸಂಗತಿ, ಸತ್ಯಾಪಲಾಪ, ಸ್ವೈರಕಲ್ಪನೆ, ಮೊದಲಾದ ದೋಷಗಳ ಮೂಲಕ ಚರಿತ್ರೆಯ ದೃಷ್ಟಿಯಿಂದ ಅವಿಶ್ವಸನೀಯವಾಗಿವೆಯೆಂದೂ ವ್ಯಕ್ತವಾಗುತ್ತದೆ. ಈ ಪ್ರಬಂಧಗಳನ್ನು ಕುರಿತು, ಬೆರಿಡೇಲ ಕೀಥ ಮೊದಲಾದ ಮಾನ್ಯ ವಿಮರ್ಶಕರು, ಇವು ಅನೈತಿಹಾಸಿಕ (unhistorical) ಮತ್ತು ಕಟ್ಟು ಕಥೆಯ ಸ್ವರೂಪದುವು (untrustworthy legends) ಆಗಿವೆಯೆಂದು ಅಭಿಪ್ರಾಯವನ್ನು ಸಾರಿದ್ದಾರೆ. ೬ ಆದುದರಿಂದ ಚಾರಿತ್ರಿಕ ವಸ್ತುಸ್ಥಿತಿ

೫. Bombay Gazetteer (1896), Vol. I, part II, P. 214.

೬. A. B. Kieth: A History of Sanskrit Literature, P. 293.

ಯನ್ನು ಕಂಡು ಹಿಡಿಯಲು ಪ್ರಯತ್ನಿಸುವವರಿಗೆ ಇವು ತ್ಯಾಜ್ಯವೂ ತಿರಸ್ಕರಣೀಯವೂ ಆಗಿವೆ.

ನಿಜಾಂಶವು ಹೀಗಿರಲು ಇಂತಹ ಅಸತ್ಯ ಮತ್ತು ವಿಕೃತ ಬರವಣಿಗೆಗಳನ್ನು ಆಧಾರವಾಗಿ ಇಟ್ಟುಕೊಂಡು ಶ್ರೀಮಾನ್ ಕೆ. ಎಂ. ಮುನಶಿಯವರಂತಹ ಆಧುನಿಕ ಮಾನ್ಯ ಲೇಖಕರು ಕಾದಂಬರಿ, ನಾಟಕ, ಮೊದಲಾದ ೭ ಸಾಹಿತ್ಯವನ್ನು ನಿರ್ಮಿಸಲು ಮುಂದುವರಿದುದು ವಿಷಾದದ ಸಂಗತಿ. ಇಂತಹ ಸಾಹಿತ್ಯದಿಂದ ಮೊದಲೇ ಕರ್ನಾಟಕದ ವಿಷಯದಲ್ಲಿ ಅಜ್ಞಾನ ಮತ್ತು ಅಸದಭಿಪ್ರಾಯವು ಮನೆಮಾಡಿಕೊಂಡಿದ್ದ ಆಧುನಿಕ ಭಾರತೀಯರಲ್ಲಿ ವಿಪರೀತ ಭಾವನೆಗಳು ಪ್ರಚುರವಾಗಲು ಸಹಾಯವಾಗಿದೆ. ಇದು ಸಾಂಸ್ಕೃತಿಕ ಪ್ರಪಂಚದಲ್ಲಿ ಕರ್ನಾಟಕಕ್ಕೆ ಒದಗಿದ ದೊಡ್ಡ ಅನ್ಯಾಯವಲ್ಲದೆ ಮತ್ತೇನು?

ಈ ಅನ್ಯಾಯವನ್ನು ಅಂಶತಃ ತೊಡೆದು ಹಾಕಲು ನಾನೀ ಕಾದಂಬರಿಯಲ್ಲಿ ಪ್ರಯತ್ನಿಸಿದ್ದೇನೆ. ಚರಿತ್ರೆಯ ಅಭ್ಯಾಸದಿಂದ ಅಂದಿನ ಕರ್ನಾಟಕದ ಸ್ಥಿತಿಗತಿಗಳನ್ನು ಕಂಡುಹಿಡಿದು ಸಾಧ್ಯವಾದ ಮಟ್ಟಿಗೆ ಯಥಾರ್ಥವಾಗಿ ಅವುಗಳನ್ನು ಚಿತ್ರಿಸಿದ್ದೇನೆ. ಈ ಚಿತ್ರವು ಏಕದೇಶೀಯವಾಗಲಿ, ಅತಿರಂಜಿತವಾಗಲಿ ಆಗಿದೆಯೆಂದು ಕರ್ನಾಟಕ ಸಂಸ್ಕೃತಿಯ ಪರಿಚಯವುಳ್ಳವರು ಭಾವಿಸಲಾರರು ಎಂದು ಆಶಿಸುತ್ತೇನೆ.

ಇನ್ನು ನಾನು ನಿರ್ಮಿಸಿದ ಸನ್ನಿವೇಶ ಮತ್ತು ಪಾತ್ರಗಳ ವಿಚಾರದಲ್ಲಿ ಒಂದೆರಡು ಅಂಶಗಳನ್ನು ಸ್ಪಷ್ಟಗೊಳಿಸುವುದು ಯುಕ್ತವಾದೀತು.

ತೈಲಪ ಮತ್ತು ಕುಮಾರ ಸತ್ಯಾಶ್ರಯ ಇವರ ಪಾತ್ರಗಳು ನಾನು ಕಂಡ ಚಾರಿತ್ರಕ ಘಟನೆಗಳಿಗೆ ಅನುಗುಣವಾಗಿ ಇವೆ. ನವರಾಜ್ಯಸಂಸ್ಥಾ

---

೭ ಶ್ರೀ. ಮುನಶಿಯವರ ಪೃಥಿವೀವಲ್ಲಭ ಎಂಬ ಗುಜರಾತಿ ಮತ್ತು ಹಿಂದೀ ಕಾದಂಬರಿಯಲ್ಲಿ ತೈಲಪ-ಮುಂಜರ ಕಥೆಯನ್ನು ವಿಕೃತವಾಗಿ ಚಿತ್ರಿಸಿದೆ. ಈ ಕಾದಂಬರಿಯ ಆಧಾರದಿಂದ ಒಂದು ಹಿಂದೀ ಚಿತ್ರಪಟವೂ ಪ್ರಚುರವಾಗಿದೆ.

ಪಕನಲ್ಲಿ ಇರಬೇಕಾದ ಶೌರ್ಯ, ಪರಾಕ್ರಮ, ಸಂಗ್ರಾಮ ಪರಿಜ್ಞಾನ, ರಾಜನೀತಿಕೌಶಲ, ದೂರದೃಷ್ಟಿ, ಮೊದಲಾದ ಗುಣಗಳನ್ನು ತೈಲಪನಲ್ಲಿ ಗುರುತಿಸಬಹುದು. ಆತನು ನಿಷ್ಠುರನಾಗಿದ್ದರೂ ಕ್ರೂರನಲ್ಲ ತನ್ನ ಕೈಯಲ್ಲಿ ಸಿಕ್ಕ ಮುಂಜನನ್ನು ಮೊದಲು ಗೌರವದಿಂದಲೂ ಔದಾರ್ಯದಿಂದಲೂ ಕಾಣುವನು. ಅನಂತರ ಇಂತಹ ಮರ್ಯಾದೆಗೆ ಆತನು ಅಪಾತ್ರನೆಂದು ಸಿದ್ಧವಾದ ಬಳಿಕ ಕಠೋರನಾಗುವನು. ನಾನು ವಿವರಿಸಿದ ತೈಲಪನ ಈ ವರ್ತನೆಯನ್ನು ಚರಿತ್ರಕಾರರ ಈ ಮಾತುಗಳು ಅನುಮೋದಿಸುತ್ತವೆ: ಲ

At first Munja was treated with consideration by his captor; but an attempt to effect his escape having been defeated, he was subjected to indignities.

ಮುಂಜರಾಜನ ಪಾತ್ರವನ್ನು ತ್ರಿಸುವಾಗ ಅನ್ಯಾಯವಾಗದಂತೆ ಜಾಗ್ರತೆಯನ್ನು ವಹಿಸಿದ್ದೇನೆ. ಆತನೊಬ್ಬ ಮಹಾವ್ಯಕ್ತಿ. ಆದರೆ ಕೆಲ ಘೋರ ದೋಷಗಳ ಮೂಲಕ ಆತನು ದಾರುಣ ದುರಂತವನ್ನು ಅನುಭವಿಸುವನು. ಈ ಅಂಶವು ಆತನ ಪಕ್ಷಪಾತಿಗಳಾದ ಚೈತ್ರರೇಯರ ಲೇಖನಗಳಿಂದಲೇ ಸ್ಫುಟವಾಗುತ್ತದೆ. ಮುಂಜರಾಜನಲ್ಲಿಯ ದೋಷಗಳು ಉದ್ರೇಕಗೊಂಡು ಆತನ ಅಧಃಪತನವಾಗಲಿಕ್ಕೆ ಎರಡು ಪಾತ್ರಗಳಿಂದ ಸಹಾಯವಾಗುತ್ತದೆ. ಆ ಪಾತ್ರಗಳು ಚಿತ್ರಾಂಗದ ಮತ್ತು ಸ್ನೇಹಲತೆ. ಈ ಪಾತ್ರಗಳನ್ನು ಸೃಷ್ಟಿಸುವಲ್ಲಿ ಉಚಿತ ಅಧಿಕಾರವನ್ನು ಉಪಯೋಗಿಸಿದ್ದೇನೆ. ಪ್ರಬಂಧಕಾರರ ಮೃಣಾಲವತಿಯನ್ನು ಸ್ನೇಹಲತೆಯಾಗಿ ಮಾರ್ಪಡಿಸಿದ್ದೇನೆ. ಸ್ನೇಹಲತೆಯ ಪಾತ್ರವನ್ನು ನಮ್ಮ ಚರಿತ್ರೆಗೂ ಸಂಸ್ಕೃತಿಗೂ ಅನುಗುಣವಾಗುವಂತೆ ಉಚಿತ ರೀತಿಯಲ್ಲಿ ರೂಪುಗೊಳಿಸಿದ್ದೇನೆ. ಮುಂಜರಾಜನ ದುರಂತಕ್ಕೆ ಈಕೆ ಸಾಕ್ಷಾತ್ ಕಾರಣವೆಂದು ತೋರಿದರೂ ಈಕೆಯ ಪರಿಚಯವಾಗುವುದಕ್ಕೆ

ಲ Bombay Gazetteer (1896), Vol. I, Part II, P 213

ಈ ಚರಿತ್ರಕಾರರು ದಿವಂಗತ ರಾಮಕೃಷ್ಣ ಗೋಪಾಳ ಭಾಂಡಾರಕರ ಇವರು.

ಮುಂಚಿತವಾಗಿಯೇ ಮುಂಜನು ತನ್ನ ಹೀನ ಮನೋವೃತ್ತಿಯನ್ನು ಪ್ರದರ್ಶಿಸಿ ರಾಜಶಾಸನಕ್ಕೆ ಅರ್ಹನಾಗಿದ್ದನೆಂಬ ವಿಷಯವನ್ನು ಮರೆಯಲಿಕ್ಕೆ ಆಗದು. ' ಶಠಂ ಪ್ರತಿ ಶಾಠ್ಯಂ ' ಎಂಬ ನೀತಿಸೂತ್ರವು ರಾಜ್ಯತಂತ್ರದಲ್ಲಿ ಮನ್ನಣೆಯನ್ನು ಪಡೆದಿದೆ. ಅದನ್ನು ಎಲ್ಲ ರಾಜ್ಯಶಾಸಕರು ಅನುಸರಿಸುತ್ತ ಬಂದಿದ್ದಾರೆ.

ಈಶಾನಯೋಗಿ ಸತ್ಯಪ್ರಪಂಚದ ವ್ಯಕ್ತಿ. ಈತನು ಪಾಶುಪತ ಎಂಬ ಶೈವ ಪಂಗಡದ ಯತಿ. ಈತನನ್ನು ತೈಲಪನ ಗುರುಸ್ಥಾನದಲ್ಲಿ ಸ್ಥಾಪಿಸುವ ಕೈವಾಡ ಮಾತ್ರ ನನ್ನದು. ಸುಮಾಲಿತೀರ್ಥವೆಂದರೆ ಇಂದಿನ ಬೆಳಗಾವಿ ಜಿಲ್ಲೆಯ ಮುರಗೋಡ ಗ್ರಾಮದ ಬಳಿಯ ಸೊಗಲ ಎಂಬ ನಿಸರ್ಗ ರಮಣೀಯ ಸ್ಥಳವು. ಈಶಾನಯೋಗಿಯ ತಪೋವನದ ವರ್ಣನೆ, ಮುಂತಾದ ಅಂಶಗಳು ಸೊಗಲದಲ್ಲಿ ದೊರೆತ ಒಂದು ಪ್ರಾಚೀನ ಶಾಸನದಿಂದ ಸೂಚಿತ ವಾದುವು.

ಈಶಾನಯೋಗಿಯ ಆಶೀರ್ವಚನದಿಂದ ಕಥೆ ಮುಗಿತಾಯವಾಗುತ್ತದೆ. ಈ ಆಶೀರ್ವಚನವು ಮುಂದೆ ಸತ್ಯಸೃಷ್ಟಿಯಾಗಿ ಪರಿಣಮಿಸಿತು. ತೈಲಪನ ಸಂತತಿಯವರು ಅನಂತರ ಉತ್ತರ ಭಾರತದ ಮಾಳವ ಮೊದಲಾದ ರಾಜ್ಯ ಗಳ ಮೇಲೆ ಅನೇಕ ದಂಡಯಾತ್ರೆಗಳನ್ನು ಕೈಕೊಂಡರು. ಅವುಗಳಲ್ಲಿ ಅವರಿಗೆ ಉತ್ತರೋತ್ತರ ವಿಜಯವು ಪ್ರಾಪ್ತವಾಯಿತು. ಈ ವಿಜಯ ಪರಂಪರೆಯ ಫಲವಾಗಿ ಕರ್ನಾಟಕದ ಅನೇಕ ಶೂರ ನಾಯಕರು ಬಂಗಾಲ, ಬಿಹಾರ, ನೇಪಾಳ, ಮೊದಲಾದ ಪ್ರದೇಶಗಳಲ್ಲಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿಕೊಂಡರು. ಕರ್ನಾಟಕದ ಸಂಸ್ಕೃತಿ ಮತ್ತು ಕರ್ನಾಟಕದ ನಾಗರಿ ಕತೆಯ ಪ್ರಭಾವವು ಎಲ್ಲೆಲ್ಲಿಯೂ ಹರಡಿತು. ಈ ಘಟನೆಗಳು ಕರ್ನಾ ಟಕದ ಉಜ್ವಲ ಇತಿಹಾಸದಲ್ಲಿಯ ಉಜ್ವಲ ಸನ್ನಿವೇಶಗಳಾಗಿವೆ.[೯] ಇಂತು

---

೯ ಈ ವಿಚಾರದಲ್ಲಿ ಜಿಜ್ಞಾಸುಗಳಾದ ವಾಚಕರು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ೧೯೪೫ ಮಾರ್ಚ ಸಂಚಿಕೆಯಲ್ಲಿ ಪ್ರಕಟವಾದ ' ಬಂಗಾಲದಲ್ಲಿ ಕರ್ನಾಟಕ' ಎಂಬ ನನ್ನ ಲೇಖನವನ್ನು ಓದಬಹುದು.

ಗೋದಾವರೀ ಸಂಗ್ರಾಮದಲ್ಲಿ ತೈಲಪನು ಮುಂಜನ ಮೇಲೆ ಸಂಪಾದಿಸಿದ ವಿಜಯವು ಆತನ ಕನಸಿನ ಎಲ್ಲೆಗಳನ್ನು ಮೀರಿ ಸತ್ಯಸೃಷ್ಟಿಯ ಅಪೂರ್ವ ಜಯಶ್ರೀಯಾಗಿ ಗೋಚರಿಸಿತು. ಕಾಲನ ಲೀಲೆ ಅಗೋಚರವಾದುದು !

ಮುಖ್ಯ ಕಥಾವಸ್ತುವನ್ನು ಸಾರವತ್ತಾಗಿಯೂ ಪರಿಣಾಮಕಾರಿಯಾಗಿಯೂ ಚಿತ್ರಿಸುವುದೇ ಈ ಕಾದಂಬರಿಯ ಉದ್ದೇಶವಾಗಿರುವುದರಿಂದ ಇದಕ್ಕೂ ಹೆಚ್ಚಿನ ವಿವರಗಳನ್ನು ರೂಪಿಸುವುದು ಶಕ್ಯವಿದ್ದರೂ ಅನಾವಶ್ಯಕವೆಂದು ನನಗೆ ತೋರಿತು. ಇದರಿಂದ ಈ ಕಾದಂಬರಿಯ ಗಾತ್ರವು ಚಿಕ್ಕದಾಗಿದೆ. ಇದಕ್ಕಾಗಿ ಕೆಲವರು 'ಇದು ಕಾದಂಬರಿಯೇ' ಎಂದು ಶಂಕಿಸಬಹುದು. ಇಂತಹರಿಗೆ ನಾನು ಹೇಳುವುದು ಇಷ್ಟೇ: 'ಹೆಸರಿನಲ್ಲಿ ಏನಿದೆ ?

ಮಿತ್ರರಾದ ಶ್ರೀಮಾನ್ ಕೃಷ್ಣಮೂರ್ತಿ ಪುರಾಣಿಕ ಅವರು ತಮ್ಮ ಸಾಹಿತ್ಯಸೇವಾಮಂದಿರದ ಪರವಾಗಿ ಈ ಕೃತಿಯನ್ನು ಮುದ್ರಿಸಿ ಪ್ರಕಾಶನಗೊಳಿಸಿದುದಕ್ಕಾಗಿ ನಾನು ಅವರಿಗೆ ಚಿರಋಣಿ.

**ದೇಸಾಯಿ ಪಾಂಡುರಂಗರಾಯ**

## ಈ ಗ್ರಂಥಕಾರನ ಬೇರೆ ಕೃತಿಗಳು



| | | |
|---|---|---|
| ೧. ವಿಜಯನಗರ ಸಾಮ್ರಾಜ್ಯ | .... | ಚರಿತ್ರೆ |
| ೨. ಮಿಂಚಿದ ಮಹಿಳೆಯರು | .... | ಆಖ್ಯಾನ |
| ೩. ಕುಂತಲೇಶ್ವರ | .... | ಐತಿಹಾಸಿಕ ಕಾದಂಬರಿ |
| ೪. ಮದಗಜ ಮಲ್ಲ | .... | ವೀರಕಥಾವಳಿ |
| ೫. ನಾಗರ ಮರಿ | .... | ವೀರಕಥಾವಳಿ |

# ಅರಿಕೆ

ಇದೊಂದು ಐತಿಹಾಸಿಕ ಕಾದಂಬರಿ. ಇದರಲ್ಲಿ ಕನ್ನಡ ಜನಾಂಗದ ಉತ್ತರ ಭಾರತೀಯ ಜಯಶೀಲ ಮಹತ್ವಾಕಾಂಕ್ಷೆಯ ಒಂದು ಸನ್ನಿವೇಶ ವೇಶವನ್ನು ಸಾರಪವತ್ತಾಗಿ ಚಿತ್ರಿಸಿದೆ. ಈ ಕಥೆಯಲ್ಲಿ ತೈಲಪ–ಮುಂಜ ರಾಜರ ಚರಿತ್ರಾಂಶಗಳ ಮೇಲೆ ಅಭ್ಯಾಸಬಲದಿಂದ ಬೀರಿದ ಹೊಸ ಬೆಳಕನ್ನು ಕಾಣಬಹುದು. ಕನ್ನಡಿಗರ ಅಮರಕಲೆಯ ರಹಸ್ಯಮಯ ವಿವೇಚನೆ ಯನ್ನು ಕಾಣಬಹುದು. ನೃಪತುಂಗನು ಸಾರಿದಂತೆ, ಅಂದಿನ ಕನ್ನಡ ಜೀವನದಲ್ಲಿ ಗೋದಾವರೀನದಿಗೆ ಪ್ರಾಮುಖ್ಯ ಸ್ಥಾನವಿದ್ದಿತು. ಉತ್ತರ ಸೀಮೆಯಲ್ಲಿ ಕನ್ನಡನಾಡಿನ ವಿಜಯಪತಾಕೆಯಾಗಿ ಬಹುಕಾಲ ರಾರಾಜಿಸಿ ದಳು—ತಾಯಿ ಗೋದಾವರಿ. ಈ ಸ್ಫೂರ್ತಿಕಾರಕ ಘಟನೆಯ ಶಬ್ದರಂಜಿತ ಸ್ಮೃತಿಚಿತ್ರವು ಈ ಕಾದಂಬರೀ ವಾಚಕರ ಕಣ್ಣಮುಂದೆ ಬಂದು ನಿಲ್ಲುತ್ತದೆ.

ಇಂತಹ ಒಂದು ಒಳ್ಳೆಯ ಕಾದಂಬರಿಯನ್ನು ಬರೆದುಕೊಟ್ಟು ನನ್ನ ‘ ಸಾಹಿತ್ಯ ಸೇವಾಮಂದಿರ ’ ದ ಪರವಾಗಿ ಪ್ರಕಟಿಸಲು ಅನುಮತಿಯನ್ನಿತ್ತು ಉಪಕಾರ ಮಾಡಿದ ಮಿತ್ರರಾದ ಶ್ರೀ ದೇಸಾಯಿ ಪಾಂಡುರಂಗರಾಯರಿಗೆ ಕೃತಜ್ಞನಾಗಿದ್ದೇನೆ.

ಸಾಧ್ಯವಾದಾಗಲೆಲ್ಲ ಒಳ್ಳೆಯ ಕೃತಿಗಳನ್ನು ಪ್ರಕಟಿಸಿ ಕನ್ನಡ ಜನಾಂಗದ ಹೆಚ್ಚಿನ ಸೇವೆಯನ್ನು ಮಾಡಬೇಕೆಂಬ ಹಂಬಲವನ್ನಿಟ್ಟುಕೊಂಡಿ ದ್ದೇನೆ. ಈ ಹಂಬಲ ಈಡೇರಬೇಕಾದರೆ ಕನ್ನಡಿಗರ ನೆರವು ಬೇಕು. ಈಗಾಗಲೇ ನನ್ನಲ್ಲಿ ಉತ್ಸಾಹ ತುಂಬುತ್ತಿರುವ ಗೆಳೆಯರನ್ನು ನೆನೆಯದಿರಲಾರೆ. ಇವರೆಲ್ಲರ ವಿಶ್ವಾಸ–ಪ್ರೇಮಗಳಿಂದ ನನ್ನ ಹಂಬಲವು ಈಡೇರಬಹುದೆಂಬ ಆಶೆಯನ್ನು ತಳೆದಿದ್ದೇನೆ.

ಈ ಕಾದಂಬರಿಯನ್ನು ಅಲ್ಪಾವಕಾಶದಲ್ಲಿ ಸುಂದರವಾಗಿ ಮುದ್ರಿಸಿ ಕೊಟ್ಟ 'ಉದಯ ಪ್ರೆಸ್ಸಿ'ನವರಿಗೆ ಕೃತಜ್ಞನಾಗಿದ್ದೇನೆ.

ಇಷ್ಟು ದಿನಗಳ ವರೆಗೆ ನನ್ನ ಕೃತಿಗಳನ್ನೇ ಪ್ರಕಟಿಸುತ್ತಿದ್ದ 'ಸಾಹಿತ್ಯ ಸೇವಾಮಂದಿರ'ವು ಇನ್ನು ಮೇಲೆ ಬೇರೆ ಬರಹಗಾರರ ಒಳ್ಳೆಯ ಕೃತಿಗಳನ್ನೂ ಪ್ರಕಟಿಸಲು ಯೋಜನೆಯನ್ನು ಕೈಕೊಂಡಿದೆ ಎಂಬುದನ್ನು ಈ ಮೂಲಕ ತಿಳಿಯಪಡಿಸುತ್ತೇನೆ. ಈ ಗುರಿಯನ್ನು ಸಾಧಿಸಲು 'ಸಾಹಿತ್ಯ ಸೇವಾಮಂದಿರ'ವು ಸಾಧ್ಯವಿದ್ದ ಪ್ರಯತ್ನವನ್ನು ಮಾಡುತ್ತದೆ. ಈ ಸೇವೆಯನ್ನು ಕನ್ನಡಿಗರು ಉತ್ಸಾಹಪೂರ್ಣವಾಗಿ ಬರಮಾಡಿಕೊಳ್ಳುವರೆಂಬ ವಿಶ್ವಾಸವನ್ನಿಟ್ಟುಕೊಂಡಿದ್ದೇನೆ.

ಸಾಹಿತ್ಯ ಸೇವಾಮಂದಿರ,
ಗೋಕಾಕ.
೩೧-೮-೧೯೫೩

— ಕೃಷ್ಣಮೂರ್ತಿ ಪುರಾಣಿಕ.

# ಜಯ ಗೋದಾವರಿ

## [೧]

" ಜಯ ಗೋದಾವರಿ !

ಈ ಜಯಘೋಷವು ಶಾಂತವಾದ ಸಂಧ್ಯಾಸಮಯದಲ್ಲಿ ದೂರದಿಂದ ಕೇಳಿಸಿತು. ಆ ಧ್ವನಿಯ ಕೂಗು ವಿಚಾರಮಗ್ನನಾಗಿ ನೆಲ್ಲನೆ ಹೆಜ್ಜೆಯಿಕ್ಕುತ್ತ ಯಾವ ಕಡೆಗೋ ಸಾಗಿದ್ದ ಒಬ್ಬ ವೀರನನ್ನು ಎಚ್ಚರಿಸಿ ತನ್ನ ಕಡೆಗೆ ಎಳೆದು ಕೊಂಡಿತು.

ಆ ಧ್ವನಿಯ ಉಗಮಸ್ಥಾನವು ಒಂದು ದೇವಾಲಯ. ಅದನ್ನು ಗೋದಾವರಿನದಿಯ ದಕ್ಷಿಣ ತೀರದ ಎತ್ತರವಾದ ಒಂದು ದಿನ್ನೆಯ ಮೇಲೆ ಕಟ್ಟಿದ್ದಿತು. ಉನ್ನತವಾದ ಅದರ ಶಿಖರವು ಕೆಲ ಹರದಾರಿಗಳ ಅಂತರದಿಂದ ಕಂಗೊಳಿಸುವಂತಿತ್ತು.

ಈ ದೇವಾಲಯದ ಪಕ್ಕದಲ್ಲಿಯೇ ಗೋದಾವರಿನದಿ ಘೋರ್ಗರೆಯುತ್ತ ಗಂಭೀರಗತಿಯಿಂದ ಹರಿಯುತ್ತಿದ್ದಿತು. ಹೊಳೆಯಲ್ಲಿ ನೀರು ಆಳವಾಗಿದ್ದು ದರಿಂದ ಅದನ್ನು ಕಾಲ್‌ನಡೆಯಿಂದ ದಾಟುವದು ಸಾಧ್ಯವಿರಲಿಲ್ಲ. ಅದಕ್ಕಾಗಿ ನಾವುಗಳ ಮತ್ತು ಹರಿಗೋಲುಗಳ ವ್ಯವಸ್ಥೆ ಇದ್ದಿತು.

ಈ ದೇವಾಲಯದ ನೆರೆಯಲ್ಲಿ ಕಲ್ಲಿನಿಂದ ಕಟ್ಟಿದ ನದಿಯ ಘಟ್ಟ ವಿದ್ದಿತು. ಈ ಘಟ್ಟಕ್ಕೆ ಅಗಲವಾದ ಮೆಟ್ಟಲುಗಳಿದ್ದು, ಅವುಗಳನ್ನು ಇಳಿದು ಹೊಳೆಯ ನೀರಿಗೆ ಹೋಗಬಹುದಾಗಿದ್ದಿತು.

ಈ ದೇವಾಲಯವು ದೇವೀಗೋದಾವರಿಯದು. ಗೋದಾವರೀದೇವಿಯ ಸುಂದರ ವಿಗ್ರಹವು ಗರ್ಭಗುಡಿಯಲ್ಲಿ ಪ್ರತಿಷ್ಠಿತವಾಗಿದ್ದಿತು. ದೇವಿಯ ಕೆಳ ಭಾಗವು ಪ್ರವಾಹದಲ್ಲಿ ಮುಳುಗಿದಂತೆಯೂ ಒಂದು ಮೊಸಳೆ ಆಕೆಗೆ ವಾಹನ

ವಾದಂತೆಯೂ ತೋರುವಂತೆ ಬಹು ಚಾತುರ್ಯದಿಂದ ಶಿಲ್ಪಿಯು ಆ ಮೂರ್ತಿಯನ್ನು ರಚಿಸಿದ್ದನು. ದೇವಿಯು ಒಂದು ಕೈಯಲ್ಲಿ ಹಂಸಪಕ್ಷಿ, ಇನ್ನೊಂದು ಕೈಯಲ್ಲಿ ಶಂಖವು, ಒಪ್ಪುತ್ತಿದ್ದುವು.

ಇದೀಗ ಈ ದೇವಾಲಯದಲ್ಲಿ ಸಾಯಂಕಾಲದ ಪೂಜೆ ಪ್ರಾರಂಭವಾಗಿದ್ದಿತು. ಈ ಶುಭಸಮಯದಲ್ಲಿ ದೇವಿಯನ್ನು ಸಂದರ್ಶಿಸುವ ಆತುರತೆಯಿಂದ ಆ ವೀರನು ದೇವಾಲಯದ ತಲೆಬಾಗಿಲಿಗೆ ಬಂದನು. ಒಳಗೆ ಅನೇಕ ಭಕ್ತರು ನೆರೆದಿದ್ದರು. ದೇವಿಯನ್ನು ಕುರಿತು ಇಂಪಾಗಿ ಹಾಡುತ್ತಿದ್ದರು. ಈ ದೃಶ್ಯವು ಆತನ ಕಣ್ಣಿಗೆ ಬಿದ್ದಿತು. ಆ ಭಕ್ತರು ಹಾಡುವ ಗೀತವು ಹೀಗಿದ್ದಿತು:

ಕನ್ನಡ ನಾಡಿನ ಐಸಿರಿಯೇ ।
ಚಿನ್ನದ ತೊರೆ ಗೋದಾವರಿಯೇ ॥

ಧನಪನ ದೆಸೆಯಲಿ ।
ಕನಸನು ಕುಣಿಸುತೆ ॥
ಜನಪದದಾಸೆಯ ।
ಮನದಾಕಾಂಕ್ಷೆಯ ॥
ಮೇರೆಯ ಆಚೆಯ ।
ವಿೀರಿದ ಸಾಹಸ ।
ವೀರರ ಬಗೆಯಲಿ ।
ಪ್ರೇರಿಸು ದೇವೀ ॥

ಈ ಹಾಡನ್ನು ಕೇಳಿ ವೀರನ ಮನಸ್ಸು ಉಲ್ಲಸಿತವಾಯಿತು. ಆತನು ಉತ್ಸಾಹದಿಂದ ದೇವಾಲಯದೊಳಗೆ ಪ್ರವೇಶಿಸಿದನು. ವೀರನ ಆಗಮನವು ಅಲ್ಲಿ ನೆರೆದ ಜನರಲ್ಲಿ ಒಂದು ಬಗೆಯ ವಿಸ್ಮಯ ಮತ್ತು ಸಂದೇಹದ ಭಾವಗಳನ್ನು ಹುಟ್ಟಿಸಿದಂತೆ ತೋರಿತು. ಅವರು ಸ್ವಲ್ಪ ಆಚೆಗೆ ಈಚೆಗೆ ಸರಿದುಕೊಂಡು ದೇವಿಯ ಸಂಮುಖಕ್ಕೆ ಹೋಗಲು ವೀರನಿಗೆ ದಾರಿಯನ್ನು ಮಾಡಿಕೊಟ್ಟರು.

ಈ ಬಗೆಯ ವಿಸ್ಮಯ ಮತ್ತು ಸಂದೇಹದ ಭಾವಗಳು ಹುಟ್ಟಲು ಕಾರಣವಾದುದು ಆ ವೀರನ ಗೂಢ ಮತ್ತು ವಿಚಿತ್ರವಾದ ಆಕೃತಿ. ವಿರಾಗಿಗಳ ವರ್ಗಕ್ಕೆ ಸೇರಿದವರಂತೆ ಆತನು ಸಂಪೂರ್ಣವಾಗಿ ಕಾವಿಯ ಉಡುಪನ್ನು ಧರಿಸಿದ್ದನು. ಹಿಂಮಡದ ವರೆಗೆ ಆವರಿಸಿಕೊಂಡಿರುವ ಚಲ್ಲಣ, ಮೊಳಕಾಲಿನ ಕೆಳಗಡೆ ನೇತಾಡುವ ನಿಲುವಂಗಿ, ಕುಲಾಯಿಯಂತೆ ತೋರಿದರೂ ಕಿರೀಟದ ಅಬ್ಬರದಿಂದ ಶೋಭಿಸಿ ಮುಖದ ಬಹುಭಾಗವನ್ನು ಮುಚ್ಚಿರುವ ಶಿರೋಭೂಷಣ; ಇವು ಆತನ ವೇಷದ ವೈಚಿತ್ರ್ಯವನ್ನು ಎತ್ತಿ ತೋರಿಸುತ್ತಿದ್ದುವು. ತ್ರಿಶೂಲದಂತಹ ಉದ್ದನೆಯ ದಂಡವು ಆತನ ಕೈಯಲ್ಲಿ ಕುಣಿದಾಡುತ್ತಿದ್ದಿತು. ಆತನ ದೇಹಯಷ್ಟಿ ಸುದೃಢವೂ ಭವ್ಯವೂ ಆಗಿದ್ದಿತು. ಧೀರೋದಾತ್ತವಾದ ಆತನ ಠೀವಿಯನ್ನು ನೋಡಿದರೆ ಆತನು ಸಾಮಾನ್ಯ ಬೈರಾಗಿಯಾಗಿರದೆ ಯಾವನೋ ಒಬ್ಬ ಕಾರ್ಯಶಾಲಿ ಪುರುಷನಾಗಿರಬೇಕು, ಎಂದು ಮನಸ್ಸಿಗೆ ಅರಿಕೆಯಾಗುತ್ತಿತ್ತು.

ಅರ್ಚಕನು ದೇವಿಗೆ ಆರತಿಯನ್ನು ಬೆಳಗಿದನು. ಪ್ರಸಾದವನ್ನು ಹಂಚಿದನು. ಪ್ರಸಾದವನ್ನು ತೆಗೆದುಕೊಂಡು ಆ ಗೂಢ ವೀರನು ಕ್ಷಣಾರ್ಧದಲ್ಲಿ ಎಲ್ಲಿಯೋ ಮಾಯವಾದನು.

ನೆರೆದ ಜನರು ಹೊರಗೆ ಬಂದರು. ಅವರಲ್ಲಿ ಕೆಲರು ಸಂದೇಹಗ್ರಸ್ತರಾಗಿ ಹಿಂದುಮುಂದು ನೋಡುತ್ತ ಮೆಲ್ಲನೆ ಕಿವಿಮಾತುಗಳನ್ನಾಡಿಕೊಂಡರು. ಇಂತಹರಲ್ಲಿಬ್ಬರು ಅವಸರದಿಂದ ಹೆಜ್ಜೆಯಿಕ್ಕುತ್ತ ದೇವಾಲಯದ ಹಿಂಬದಿಗೆ ಹೋದರು. ಆ ಮಬ್ಬುಗತ್ತಲೆಯಲ್ಲಿ ಕಣ್ಣನ್ನು ಅರಳಿಸಿ ಅಲ್ಲಿ ಬೇರೆ ಯಾರೂ ಇಲ್ಲವೆಂದು ಮನದಟ್ಟು ಮಾಡಿಕೊಂಡು ಮಾತನ್ನು ಆರಂಭಿಸಿದರು:

“ ಸಿಂಗನಾಯಕರೇ, ಇದೇನು ಗೂಢವೆಂದು ಬಹುದಿನದಿಂದ ನಿಮ್ಮನ್ನು ಕೇಳಬೇಕೆನ್ನುತ್ತಿದ್ದೇನೆ. ಇದೀಗ ದೇವಾಲಯದಲ್ಲಿ ಆರತಿಯ ಸಮಯಕ್ಕೆ ಬಂದ ಆ ಆಗಂತುಕನು ಯಾರು ? ”

“ ಮಾರನಾಯಕರೇ, ನಿಮ್ಮಂತೆ ನನಗೂ ಅದೊಂದು ಸಮಸ್ಯೆಯ ವಿಷಯವಾಗಿದೆ. ಆತನನ್ನು ನಾನು ಇಂದು ಮಾತ್ರವಲ್ಲ, ಹಿಂದೆ ಹಲವು ಬಾರಿ

ನೋಡಿದ್ದೇನೆ. ಆದರೆ ಆತನ ಗುಟ್ಟನ್ನು ಕಂಡುಹಿಡಿಯುವುದು ನನಗೆ ಸಾಧ್ಯವಾಗಿಲ್ಲ."

"ಸಿಂಗನಾಯಕರೇ! ಆತನು ನನಗೂ ಬೇರೆ ಬೇರೆ ವೇಷಗಳಲ್ಲಿ ಅಲ್ಲಿ ಇಲ್ಲಿ ಸಿಕ್ಕಿದ್ದಾನೆ. ಒಂದೆರಡುಸಲ ಆತನು ನಾವೆಯಲ್ಲಿ ಕುಳಿತು ಹೊಳೆಯ ಆಚೆಯ ದಂಡೆಗೆ ಹೋಗುವುದನ್ನು ಲಕ್ಷಿಸಿದ್ದೇನೆ. ಇದರಿಂದಾಗಿ ಆತನು ಶತ್ರುಪಕ್ಷದ ಗುಪ್ತಚಾರನಾಗಿರಬಹುದೇ ಎಂಬ ಸಂದೇಹವು ಒಮ್ಮೊಮ್ಮೆ ನನ್ನಲ್ಲಿ ತಲೆದೋರಿದೆ."

"ಛೇ; ಸಾಧ್ಯವಿಲ್ಲ, ಮಾರನಾಯಕರೇ! ಶತ್ರುಪಕ್ಷದವನಾಗಿದ್ದರೆ ನಮ್ಮವರು ಆತನನ್ನು ಸುಮ್ಮನೆ ಬಿಡುತ್ತಿದ್ದರೇ? ಎಂದೋ ಆತನನ್ನು ಮೀನ ಮೊಸಳೆಗಳ ಪಾಲು ಮಾಡುತ್ತಿದ್ದರು. ಆತನು ನಮ್ಮ ಪಕ್ಷದವನೇ ಆಗಿರಬೇಕು. ಪರಮಭಟ್ಟಾರಕರ ಸ್ವಂತದ ಶಿಬಿರದಲ್ಲಿ ಕೂಡ ನಿರ್ಭಯವಾಗಿ ಸಂಚರಿಸುವ ಆತನನ್ನು ನೋಡಿದರೆ ಆತನು ನಮ್ಮ ರಾಜ್ಯದ ಯಾವನೋ ಒಬ್ಬ ವಿಶ್ವಸ್ತ ಅಧಿಕಾರಿಯಾಗಿರಬಹುದು, ಎಂದು ಊಹಿಸಬೇಕಾಗುತ್ತದೆ."

"ನಿಮ್ಮ ಊಹೆ ನಿಜವಿದ್ದಂತೆ ತೋರುತ್ತದೆ, ಸಿಂಗನಾಯಕರೆ. ಆತನ ವೇಷವು ಸ್ವಲ್ಪ ಮಟ್ಟಿಗೆ ಸಂನ್ಯಾಸಿಯ ಉಡುಪಿನಂತೆ ಕಂಡರೂ ಆತನ ರೀತಿ ಮತ್ತು ನಡವಳಿ ಮಾತ್ರ ದಂಡನಾಯಕನಿಗೆ ಸಲ್ಲುವಂತಹವಾಗಿವೆ. ಎಲ್ಲ ಕಡೆಗೆ ನಿರ್ಭೀತಿಯಿಂದ ಸಂಚರಿಸುವ ಆತನ ಆ ಧೈರ್ಯ ಮತ್ತು ಗಾಂಭೀರ್ಯವು ಅಚ್ಚರಿಗೊಳಿಸುವಂತಹವಾಗಿವೆ."

"ಅದಿರಲಿ, ಮಾರನಾಯಕರೇ! ಅಕೋ, ಕೇಳಿ ಶಿಬಿರದಲ್ಲಿ ಕಹಳೆ ಊದುತ್ತಲಿದೆ. ರಾತ್ರಿಯ ಕಾವಲಿಗಾಗಿ ಸಿದ್ಧರಾಗಿರಬೇಕೆಂದು ದಂಡಿನವರನ್ನು ಜಾಗೃತಗೊಳಿಸುತ್ತಿದೆ."

"ಹಾಗಾದರೆ, ಬನ್ನಿ."

ಈ ಸಂಭಾಷಣೆ ಮಾರನಾಯಕ ಮತ್ತು ಸಿಂಗನಾಯಕ ಎಂಬ ಇಬ್ಬರು ಸೈನಿಕರಲ್ಲಿ ನಡೆಯಿತು. ಸಿಂಗನಾಯಕನು ನಿರ್ದೇಶಿಸಿದ ಶಿಬಿರವು ಒಂದು ಮಹಾಸೇನೆಯ ಪಾಳೆಯವಾಗಿದ್ದಿತು. ಈ ಮಹಾಸೇನೆ ಈಗ ಸ್ವಲ್ಪ ಕಾಲದಿಂದ ಗೋದಾವರೀನದಿಯ ವಿಸ್ತಾರವಾದ ದಕ್ಷಿಣ ತೀರದಲ್ಲಿ ಬೀಡು

ಬಿಟ್ಟಿದ್ದಿತು. ಇದೀಗ ನಡೆದ ಗೋದಾವರೀದೇವಿಯ ಪೂಜೆಯಲ್ಲಿ ಭಾಗ ವಹಿಸಿದ ಅನೇಕರು ಈ ಮಹಾಸೇನೆಯಲ್ಲಿಯ ಸೈನಿಕರು.

ಈ ಮಹಾಸೇನೆ ಕರ್ನಾಟಕದಿಂದ ಬಂದಿದ್ದಿತು. ಕರ್ನಾಟಕದ ಉದಿತೋದಿತ ಚಕ್ರೇಶ್ವರನಾದ ಪರಮಭಟ್ಟಾರಕ ತೈಲಪನು ರಾಷ್ಟ್ರಕೂಟರ ಆಳಿಕೆಯನ್ನು ಅಡಗಿಸಿ ತನ್ನ ಚಲುಕ್ಯ ಮನೆತನದ ಅಧಿರಾಜ್ಯವನ್ನು ಪುನಃ ಸ್ಥಾಪನ ಮಾಡುವ ಕಾರ್ಯದಲ್ಲಿ ಜಯಶೀಲನಾಗಿದ್ದನು. ಈವರೆಗೆ ಕರ್ನಾಟಕದ ಬಹುಭಾಗವು ಆತನ ಸ್ವಾಧೀನಕ್ಕೆ ಬಂದಿದ್ದಿತು. ಆದರೆ ಕರ್ನಾಟಕದ ಬಡಗಣ ಗಡಿಯಲ್ಲಿರುವ ಶತ್ರುಗಳನ್ನು ಮುರಿಬಡಿಯದೆ ತನ್ನ ರಾಜ್ಯಕ್ಕೆ ಸುಖ ಶಾಂತಿಗಳು ಸಾಕಷ್ಟು ಲಭಿಸವು ಎಂದು ಆತನು ಬಗೆದಿದ್ದನು.

ಕರ್ನಾಟಕದ ಬಡಗಣ ಗಡಿಯಲ್ಲಿಯ ಈ ಶತ್ರುಗಳು ಮಾಳವದ ಪರಮಾರರು. ಇವರಿಂದ ರಾಷ್ಟ್ರಕೂಟರ ಆಳಿಕೆಯಲ್ಲಿ ಹಲವು ಬಾರಿ ಉಪದ್ರವಗಳು ಉಂಟಾಗಿದ್ದುವು. ರಾಷ್ಟ್ರಕೂಟರ ಕೊನೆಯ ರಾಜನಾದ ಖೊಟ್ಟಿಗನ ಆಳಿಕೆಯಲ್ಲಿ ಮಾಳವ ದೇಶದ ಸೈನ್ಯವು ಆತನ ರಾಜಧಾನಿಯಾದ ಮಾನ್ಯಖೇಟದ ವರೆಗೆ ನುಗ್ಗಿ ಅದನ್ನು ಉಧ್ವಸ್ತಗೊಳಿಸಿದ್ದಿತು. ಅದರ ಸೇಡನ್ನು ತೀರಿಸುವ ಕಾರ್ಯಕ್ಕೆ ರಾಷ್ಟ್ರಕೂಟರ ಉತ್ತರಾಧಿಕಾರಿಯಾದ ಪರಮಭಟ್ಟಾರಕ ತೈಲಪನು ಉದ್ಯುಕ್ತನಾದನು.

ಕರ್ನಾಟಕದ ಶತ್ರುಗಳಾದ ಮಾಳವದ ಪರಮಾರರನ್ನು ಸದೆಬಡಿಯುವ ಉದ್ದೇಶದಿಂದ ತೈಲಪನು ಉತ್ತರದಲ್ಲಿ ಹಲವು ಬಾರಿ ದಂಡಯಾತ್ರೆಗಳನ್ನು ಕಳುಹಿದ್ದನು. ಆದರೆ ಅವುಗಳಿಂದ ಹೆಚ್ಚಿನ ಪ್ರಯೋಜನವಾಗಿರಲಿಲ್ಲ. ಅದಕ್ಕಾಗಿ ಇನ್ನೊಂದು .ಹೆಚ್ಚಿನ ಪ್ರಯತ್ನವನ್ನು ಮಾಡಬೇಕೆಂದು ತೈಲಪನು ಯೋಚಿಸಿದನು. ದೊಡ್ಡದಾದ ದಂಡನ್ನು ಕೂಡಿಸಿ ಆ ಸೈನ್ಯದ ನೇತೃತ್ವವನ್ನು ತಾನೇ ವಹಿಸಿದನು. ಕರ್ನಾಟಕದ ಉತ್ತರ ಮೇರೆಯಾದ ಗೋದಾವರೀನದಿಯ ವರೆಗೆ ಬಂದನು. ಅದರ ದಕ್ಷಿಣ ತೀರದಲ್ಲಿ ಪಾಳೆಯವನ್ನು ಸ್ಥಾಪಿಸಿದನು. ತನ್ನ ಭದ್ರ ಸ್ಥಳವನ್ನು ಬಿಟ್ಟು ಇಷ್ಟು ದೂರದ ವರೆಗೆ ಬಂದಿದ್ದ ತೈಲಪನು ಒಮ್ಮೆಲೆ ಆ ನದಿಯನ್ನು ದಾಟಿ ವೈರಿಗಳ ರಾಜ್ಯದಲ್ಲಿ

ನೋಡಿದ್ದೇನೆ. ಆದರೆ ಆತನ ಗುಟ್ಟನ್ನು ಕಂಡುಹಿಡಿಯುವುದು ನನಗೆ ಸಾಧ್ಯವಾಗಿಲ್ಲ."

"ಸಿಂಗನಾಯಕರೇ! ಆತನು ನನಗೂ ಬೇರೆ ಬೇರೆ ವೇಷಗಳಲ್ಲಿ ಅಲ್ಲಿ ಇಲ್ಲಿ ಸಿಕ್ಕಿದ್ದಾನೆ. ಒಂದೆರಡುಸಲ ಆತನು ನಾವೆಯಲ್ಲಿ ಕುಳಿತು ಹೊಳೆಯ ಆಚೆಯ ದಂಡೆಗೆ ಹೋಗುವುದನ್ನು ಲಕ್ಷಿಸಿದ್ದೇನೆ. ಇದರಿಂದಾಗಿ ಆತನು ಶತ್ರು ಪಕ್ಷದ ಗುಪ್ತಚಾರನಾಗಿರಬಹುದೇ ಎಂಬ ಸಂದೇಹವು ಒಮ್ಮೊಮ್ಮೆ ನನ್ನಲ್ಲಿ ತಲೆದೋರಿದೆ."

"ಛೇ; ಸಾಧ್ಯವಿಲ್ಲ, ಮಾರನಾಯಕರೇ! ಶತ್ರುಪಕ್ಷದವನಾಗಿದ್ದರೆ ನಮ್ಮವರು ಆತನನ್ನು ಸುಮ್ಮನೆ ಬಿಡುತ್ತಿದ್ದರೇ? ಎಂದೋ ಆತನನ್ನು ಮೀನ ಮೊಸಳೆಗಳ ಪಾಲು ಮಾಡುತ್ತಿದ್ದರು. ಆತನು ನಮ್ಮ ಪಕ್ಷದವನೇ ಆಗಿರ ಬೇಕು. ಪರಮಭಟ್ಟಾರಕರ ಸ್ವಂತದ ಶಿಬಿರದಲ್ಲಿ ಕೂಡ ನಿರ್ಭಯವಾಗಿ ಸಂಚರಿಸುವ ಆತನನ್ನು ನೋಡಿದರೆ ಆತನು ನಮ್ಮ ರಾಜ್ಯದ ಯಾವನೋ ಒಬ್ಬ ವಿಶ್ವಸ್ತ ಅಧಿಕಾರಿಯಾಗಿರಬಹುದು, ಎಂದು ಊಹಿಸಬೇಕಾಗುತ್ತದೆ."

"ನಿಮ್ಮ ಊಹೆ ನಿಜವಿದ್ದಂತೆ ತೋರುತ್ತದೆ, ಸಿಂಗನಾಯಕರೆ. ಆತನ ವೇಷವು ಸ್ವಲ್ಪ ಮಟ್ಟಿಗೆ ಸಂನ್ಯಾಸಿಯ ಉಡುಪಿನಂತೆ ಕಂಡರೂ ಆತನ ರೀತಿ ಮತ್ತು ನಡವಳಿ ಮಾತ್ರ ದಂಡನಾಯಕನಿಗೆ ಸಲ್ಲುವಂತಹ ವಾಗಿವೆ. ಎಲ್ಲ ಕಡೆಗೆ ನಿರ್ಭೀತಿಯಿಂದ ಸಂಚರಿಸುವ ಆತನ ಆ ಧೈರ್ಯ ಮತ್ತು ಗಾಂಭೀರ್ಯವು ಅಚ್ಚರಿಗೊಳಿಸುವಂತಹವಾಗಿವೆ."

"ಅದಿರಲಿ, ಮಾರನಾಯಕರೇ! ಅಕೋ, ಕೇಳಿ ಶಿಬಿರದಲ್ಲಿ ಕಹಳೆ ಊದುತ್ತಲಿದೆ. ರಾತ್ರಿಯ ಕಾವಲಿಗಾಗಿ ಸಿದ್ಧರಾಗಿರಬೇಕೆಂದು ದಂಡಿನವರನ್ನು ಜಾಗೃತಗೊಳಿಸುತ್ತಿದೆ."

"ಹಾಗಾದರೆ, ಬನ್ನಿ."

ಈ ಸಂಭಾಷಣೆ ಮಾರನಾಯಕ ಮತ್ತು ಸಿಂಗನಾಯಕ ಎಂಬ ಇಬ್ಬರು ಸೈನಿಕರಲ್ಲಿ ನಡೆಯಿತು. ಸಿಂಗನಾಯಕನು ನಿರ್ದೇಶಿಸಿದ ಶಿಬಿರವು ಒಂದು ಮಹಾಸೇನೆಯ ಪಾಳೆಯವಾಗಿದ್ದಿತು. ಈ ಮಹಾಸೇನೆ ಈಗ ಸ್ವಲ್ಪ ಕಾಲದಿಂದ ಗೋದಾವರೀನದಿಯ ವಿಸ್ತಾರವಾದ ದಕ್ಷಿಣ ತೀರದಲ್ಲಿ ಬೀಡು

ಬಿಟ್ಟಿದ್ದಿತು. ಇದೀಗ ನಡೆದ ಗೋದಾವರೀದೇವಿಯ ಪೂಜೆಯಲ್ಲಿ ಭಾಗ ವಹಿಸಿದ ಅನೇಕರು ಈ ಮಹಾಸೇನೆಯಲ್ಲಿಯ ಸೈನಿಕರು.

ಈ ಮಹಾಸೇನೆ ಕರ್ನಾಟಕದಿಂದ ಬಂದಿದ್ದಿತು. ಕರ್ನಾಟಕದ ಉದಿತೋದಿತ ಚಕ್ರೇಶ್ವರನಾದ ಪರಮಭಟ್ಟಾರಕ ತೈಲಪನು ರಾಷ್ಟ್ರಕೂಟರ ಆಳಿಕೆಯನ್ನು ಅಡಗಿಸಿ ತನ್ನ ಚಲುಕ್ಯ ಮನೆತನದ ಅಧಿರಾಜ್ಯವನ್ನು ಪುನಃ ಸ್ಥಾಪನ ಮಾಡುವ ಕಾರ್ಯದಲ್ಲಿ ಜಯಶೀಲನಾಗಿದ್ದನು. ಈವರೆಗೆ ಕರ್ನಾಟಕದ ಬಹುಭಾಗವು ಆತನ ಸ್ವಾಧೀನಕ್ಕೆ ಬಂದಿದ್ದಿತು. ಆದರೆ ಕರ್ನಾಟಕದ ಬಡಗಣ ಗಡಿಯಲ್ಲಿರುವ ಶತ್ರುಗಳನ್ನು ಮುರಿಬಡಿಯದೆ ತನ್ನ ರಾಜ್ಯಕ್ಕೆ ಸುಖ ಶಾಂತಿಗಳು ಸಾಕಷ್ಟು ಲಭಿಸವು ಎಂದು ಆತನು ಬಗೆದಿದ್ದನು.

ಕರ್ನಾಟಕದ ಬಡಗಣ ಗಡಿಯಲ್ಲಿಯ ಈ ಶತ್ರುಗಳು ಮಾಳವದ ಪರಮಾರರು. ಇವರಿಂದ ರಾಷ್ಟ್ರಕೂಟರ ಆಳಿಕೆಯಲ್ಲಿ ಹಲವು ಬಾರಿ ಉಪದ್ರವಗಳು ಉಂಟಾಗಿದ್ದುವು. ರಾಷ್ಟ್ರಕೂಟರ ಕೊನೆಯ ರಾಜನಾದ ಖೊಟ್ಟಿಗನ ಆಳಿಕೆಯಲ್ಲಿ ಮಾಳವ ದೇಶದ ಸೈನ್ಯವು ಆತನ ರಾಜಧಾನಿಯಾದ ಮಾನ್ಯಖೇಟದ ವರೆಗೆ ನುಗ್ಗಿ ಅದನ್ನು ಉಧ್ವಸ್ತಗೊಳಿಸಿದ್ದಿತು. ಅದರ ಸೇಡನ್ನು ತೀರಿಸುವ ಕಾರ್ಯಕ್ಕೆ ರಾಷ್ಟ್ರಕೂಟರ ಉತ್ತರಾಧಿಕಾರಿಯಾದ ಪರಮಭಟ್ಟಾರಕ ತೈಲಪನು ಉದ್ಯುಕ್ತನಾದನು.

ಕರ್ನಾಟಕದ ಶತ್ರುಗಳಾದ ಮಾಳವದ ಪರಮಾರರನ್ನು ಸದೆಬಡಿಯುವ ಉದ್ದೇಶದಿಂದ ತೈಲಪನು ಉತ್ತರದಲ್ಲಿ ಹಲವು ಬಾರಿ ದಂಡಯಾತ್ರೆಗಳನ್ನು ಕಳುಹಿದ್ದನು. ಆದರೆ ಅವುಗಳಿಂದ ಹೆಚ್ಚಿನ ಪ್ರಯೋಜನವಾಗಿರಲಿಲ್ಲ. ಅದಕ್ಕಾಗಿ ಇನ್ನೊಂದು .ಹೆಚ್ಚಿನ ಪ್ರಯತ್ನವನ್ನು ಮಾಡಬೇಕೆಂದು ತೈಲಪನು ಯೋಚಿಸಿದನು. ದೊಡ್ಡದಾದ ದಂಡನ್ನು ಕೂಡಿಸಿ ಆ ಸೈನ್ಯದ ನೇತೃತ್ವವನ್ನು ತಾನೇ ವಹಿಸಿದನು. ಕರ್ನಾಟಕದ ಉತ್ತರ ಮೇರೆಯಾದ ಗೋದಾವರೀನದಿಯ ವರೆಗೆ ಬಂದನು. ಅದರ ದಕ್ಷಿಣ ತೀರದಲ್ಲಿ ಪಾಳೆಯವನ್ನು ಸ್ಥಾಪಿಸಿದನು. ತನ್ನ ಭದ್ರ ಸ್ಥಳವನ್ನು ಬಿಟ್ಟು ಇಷ್ಟು ದೂರದ ವರೆಗೆ ಬಂದಿದ್ದ ತೈಲಪನು ಒಮ್ಮೆಲೆ ಆ ನದಿಯನ್ನು ದಾಟಿ ವೈರಿಗಳ ರಾಜ್ಯದಲ್ಲಿ

ಧುಮುಕಲು ಆಶಿಸಲಿಲ್ಲ. ಹಾಗೆ ಮಾಡಿದರೆ ಜಯವು ನಿಶ್ಚಯವಾಗಿ ದೊರೆತೀ ತೆಂಬ ನಂಬುಗೆ ಆತನಿಗೆ ಇರಲಿಲ್ಲ. ಅದಕ್ಕಾಗಿ ತೈಲಪನು ದೂರಾಲೋಚನೆ ಯಿಂದ ಸಮಯವನ್ನು ಕಾಯ್ದುಕೊಂಡಿದ್ದನು. ಶತ್ರುಪಕ್ಷದ ಬಲಾಬಲ ವನ್ನು ಮತ್ತು ಚಲನವಲನಗಳನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳುವ ಕೆಲಸದಲ್ಲಿ ತೊಡಗಿದ್ದನು. ತನ್ನೀ ವಿಲಂಬ ನೀತಿಯಿಂದ ಭ್ರಮೆಗೊಂಡ ಶತ್ರುಗಳು ಹೊಳೆಯನ್ನು ದಾಟಿ ತನ್ನ ಸೈನ್ಯದ ಮೇಲೆ ಏರಾಟ ಮಾಡುವುದಾದರೆ, ಅದು ತನಗೆ ಅನುಕೂಲವಾದೀತೆಂದು ಆತನು ಎಣಿಕೆ ಹಾಕುತ್ತಿದ್ದನು.

ಈ ಪರಿಸ್ಥಿತಿಯನ್ನು ಅರಿತವರಾದ ಮಾಳವರಾಜ್ಯದ ಅಧಿಕಾರಿಗಳಾ ದರೂ ಗೋದಾವರಿಯ ಆಚೆಯ ತೀರದಲ್ಲಿ ಪಾಳೆಯ ಪಟ್ಟುಗಳನ್ನು ಸ್ಥಾಪಿಸಿ ಮುಂದು ಬರುವುದನ್ನು ಬಹು ದಕ್ಷತೆಯಿಂದ ನಿರೀಕ್ಷಿಸುತ್ತಿದ್ದರು. ಹೊಳೆಯ ಎರಡೂ ದಂಡೆಗಳ ಉದ್ದಕ್ಕೂ ಉಭಯ ಪಕ್ಷದ ದಂಡಿನವರು ಬಹು ಜಾಗರೂಕತೆಯಿಂದ ಕಾವಲು ಮಾಡುತ್ತಿದ್ದರು. ಹೊಳೆಯನ್ನು ಈಚೆಯಿಂದ ದಾಟಿ ಆಚೆಯ ದಂಡೆಯ ಮೇಲೆ ಕಾಲಿಕ್ಕಲು ಯಾರಿಗೂ ಸಾಧ್ಯವಿರಲಿಲ್ಲ. "ಸಂದೇಹ ಬಂದಲ್ಲಿ ಅನುಮಾನ ಮಾಡದೆ ತುಂಡರಿಸಿ ಚೆಲ್ಲಿರಿ," ಎಂಬುದಾಗಿ ಕಠೋರ ರಾಜಶಾಸನದ ಖಡ್ಗವು ಅವರ ತಲೆಯ ಮೇಲೆ ತೂಗುತ್ತಿದ್ದಿತು. ಅವರಲ್ಲಿಯೂ ರಾತ್ರಿಯ ಕಾವಲೆಂದರೆ ಬಲು ಉಗ್ರ, ಬಹು ಕ್ರೂರ.

## [ ೨ ]

"ಯಾರವನು? ಸರಿದು ನಿಲ್ಲತ್ತ! ಮಿತ್ರನೋ ಅಮಿತ್ರನೋ?" ನಾಗರಹಾವಿನಂತೆ ದಕ್ಷತೆಯಿಂದ ಶಿಬಿರದ ಬಾಗಿಲನ್ನು ಕಾಯುತ್ತಿದ್ದ ಭವ್ಯ ಸೈನಿಕನು ಕರ್ಕಶವಾಗಿ ಪ್ರಶ್ನೆಮಾಡಿದನು. ಕಗ್ಗತ್ತಲೆಯಲ್ಲಿ ಯಾವುದೋ ಒಂದು ಅಸ್ಪಷ್ಟ ಆಕೃತಿ ಲಗುಬಗೆಯಿಂದ ಆ ಶಿಬಿರದ ಕಡೆಗೆ ಬರುತ್ತಿದ್ದಿತು.

"ಮಿತ್ರನೇ, ಕೇವಲ ಮಿತ್ರ!" ತಟ್ಟನೆ, ಸೌಮ್ಯವಾದರೂ ನಿಶ್ಚಿತ ಸ್ವರದಿಂದ, ಪ್ರಶ್ನೆಗೆ ಉತ್ತರ ಬಂದಿತು. ಈ ಉತ್ತರವನ್ನು ಕೊಟ್ಟ ವ್ಯಕ್ತಿಯ ರೂಪರೇಷೆಗಳು ರಾತ್ರಿಯ ಆ ಕತ್ತಲೆಯಲ್ಲಿ ಸ್ಫುಟವಾಗಿ ಕಾಣುತ್ತಿರಲಿಲ್ಲ. ಅದರ ಉದ್ದನೆಯ ನಿಲುವು ಮತ್ತು ಕೈಯಲ್ಲಿಯ ನೀಳವಾದ ದಂಡವು ಇವೆರಡು ಮಾತ್ರ ಸೈನಿಕನ ಪರಿಚಯಕ್ಕೆ ಸಹಾಯವಾದುವು.

"ಬಿಂಬವೆಲ್ಲಿ?" ಸೈನಿಕನು ಸ್ವರವನ್ನು ಸ್ವಲ್ಪ ತಗ್ಗಿಸಿ ಕೇಳಿದನು.

ಬಂದ ಮನುಷ್ಯನು ವಸ್ತ್ರದೊಳಗಿಂದ ಹೊಳೆಯುವ ವಸ್ತುವನ್ನು ಹೊರ ತೆಗೆದು ಕೈಯಲ್ಲಿ ಹಿಡಿದು ತೋರಿಸಿದನು.

ಸೈನಿಕನು ಅದನ್ನು ದೀಪಟಿಗೆಯ ಬೆಳಕಿನಲ್ಲಿ ದಿಟ್ಟಿಸಿ ನೋಡಿ ತಲೆ ದೂಗಿದನು; "ಹುಲಿ, ಹೆಬ್ಬುಲಿ! ಹೆಬ್ಬುಲಿಗೆ ನಮ್ಮ ಶಿಬಿರದಲ್ಲಿ ಸ್ವಾಗತವು," ಎಂದು ನುಡಿದನು.

"ಪರಮಭಟ್ಟಾರಕರು ಏನು ಮಾಡುತ್ತಿರುವರು?" ಬಂದವನು ಅಧಿಕಾರದಿಂದ ಕೇಳಿದನು.

"ನಾಳಿನ ದಿನ ಕಳುಹತಕ್ಕ ಓಲೆಗಳನ್ನು ಬರೆಯಿಸಿ ಅಂಕಿತಮಾಡಿ ವಿಶ್ರಮಿಸುತ್ತಿರುವರು."

"ಸರಿ, ಜಯ ವರಾಹ!" ಬಂದವನು ಮುಂದಕ್ಕೆ ನಡೆದನು.

"ಶ್ರೀ ವರಾಹ!" ಸೈನಿಕನು ಅಭಿವಂದಿಸಿದನು.

ಬಂದವನು ಶಿಬಿರದ ಒಳಕ್ಕೆ ಪ್ರವೇಶ ಮಾಡಿದನು. ಶಿಬಿರದ ಒಳ ಭಾಗವು ದೀಪದ ಬೆಳಕಿನಿಂದ ಪ್ರಕಾಶಿತವಾಗಿತ್ತು.

ಶಿಬಿರದ ಒಳಭಾಗವು ವಿಸ್ತಾರವಾಗಿದ್ದಿತು ಅದರ ಪ್ರವೇಶದ್ವಾರದ ಇದಿರಿನ ಗೋಡೆಯ ಬಳಿಯಲ್ಲಿ ಬಲಬದಿಗೆ ಒಂದು ಚಿಕ್ಕ ಮಂಟಪದಂತಹ ರಚನೆಯಿದ್ದು, ಅದರ ಮಧ್ಯದಲ್ಲಿ ಎತ್ತರವಾದ ಪೀಠದ ಮೇಲೆ ಭವ್ಯವಾದ ವರಾಹ ವಿಗ್ರಹವು ಶೋಭಿಸುತ್ತಿದ್ದಿತು. ಆ ಮಂಟಪದ ಬಲ ಪಕ್ಕದಲ್ಲಿ ಹಲಗೆಯ ಉದ್ದನೆಯ ಒಂದು ಆಸನವಿದ್ದು, ಅದರ ಮೇಲೆ ಮತ್ತು ಕೆಳಗೆ ಬಗೆಬಗೆಯ ಕತ್ತಿ, ಬಿಲ್ಲು, ಈಟಿ, ಕವಚ, ಗುರಾಣಿ ಮೊದಲಾದ ಯುದ್ಧೋಪಯೋಗಿ ಭೀಕರ ಆಯುಧಗಳು ಪ್ರದರ್ಶನಕ್ಕಾಗಿ ಇರಿಸಿದಂತೆ ಓರಣದಿಂದ ಒಪ್ಪುತ್ತಿದ್ದುವು.

ಮಂಟಪದಿಂದೀಚೆಗೆ ಸ್ವಲ್ಪ ಅಂತರದಲ್ಲಿ ಪ್ರಶಸ್ತವಾದ ಒಂದು ಮಂಚವಿದ್ದು, ಅದರ ಮೇಲೆ ಹರೆಯವನ್ನು ದಾಟಿದ ಮಹಾವೀರನೊಬ್ಬನು ವಿಚಾರಮಗ್ನತೆಯಲ್ಲಿ ಕುಳಿತುಕೊಂಡಿದ್ದನು. ಆತನ ಮುಖವು ಮನೋಹರ

ವಾಗಿರದಿದ್ದರೂ ಕ್ಷಾತ್ರ ತೇಜಸ್ಸಿನ ಕಾಂತಿಯಿಂದ ಉಜ್ವಲವಾಗಿದ್ದಿತು. ಆ ಮಹಾವೀರನ ವದನದಲ್ಲಿ ಮೂಡಿ ನಿಂತಿದ್ದ ಕೃಷ್ಣಚ್ಛಾಯೆಯ ರೇಖೆಗಳು, ಈತನು ತನ್ನ ಜೀವನದಲ್ಲಿ ಅನೇಕ ಕಷ್ಟನಿಷ್ಠುರಗಳನ್ನು ಸಹಿಸಿರಬೇಕೆಂತಲೂ ಪ್ರತಿಕೂಲ ಪರಿಸ್ಥಿತಿಯ ಹೋರಾಟದಲ್ಲಿ ಅದಮ್ಯ ಆತ್ಮವಿಶ್ವಾಸ ಮತ್ತು ಅಜೇಯ ಅಂತಃಶಕ್ತಿಯ ಬಲದಿಂದ ಜಯಶಾಲಿಯಾಗಿರಬೇಕೆಂತಲೂ ಸೂಕ್ಷ್ಮ ದೃಷ್ಟಿಯುಳ್ಳವರಿಗೆ ಸೂಚಿಸುತ್ತಿದ್ದುವು. ಮೊದಲು ಬಾರಿ ನೋಡುವವರಿಗೆ ಈತನ ಆಕೃತಿಯಲ್ಲಿ ತೋರುವ ಗಾಂಭೀರ್ಯದ ಉಗ್ರತೆ ಹೆದರಿಕೆಯನ್ನು ಹುಟ್ಟಿಸುತ್ತಿದ್ದಿತು.

ಬಂದವನು ಈ ಮಹಾವೀರನಿಗೆ ಪ್ರಣಾಮಮಾಡಿ ನಿಂತುಕೊಂಡನು. ಮಹಾವೀರನು ಈತನ ಕಡೆಗೆ ನೋಟವನ್ನು ಹೊರಳಿಸಿದನು. ಆತನ ಮುಖ ಮಂಡಲದಲ್ಲಿ ಸಂತೋಷದ ಒಂದು ಕಿರಣವು ಮಿಂಚಿ ಮರೆಯಾದಂತೆ ಭಾಸ ವಾಯಿತು.

“ ಬಾ, ಕು— ” ಎಂದು ಹೇಳಹೊರಟಿದ್ದ ಮಹಾವೀರನು ಅಲ್ಲಿಗೇ ನಿಂತು ನಾಲಗೆಯನ್ನು ಕಚ್ಚಿಕೊಂಡನು.

ಆಗಂತುಕನು ವಿನಯವಾಗಿ ಸೂಚಿಸಿದನು.

“ ಪರಮಭಟ್ಟಾರಕರು ನನ್ನೊಡನೆ ಮಾತನಾಡುವಾಗ ಸದಾ ಜಾಗ್ರತ ರಾಗಿರಬೇಕೆಂದು ಬೇಡುತ್ತೇನೆ. ಎಂತಹ ಭದ್ರವಾದ ಕಟ್ಟಡದ ಗೋಡೆಗೂ ಕಿವಿಯಿರುತ್ತವೆಯೆಂದು ಹೇಳುವರಲ್ಲ! ಇದಂತೂ ಹೇಳಿ ಕೇಳಿ ಶಿಬಿರ. ಶತ್ರುಗಳು ಹೊಂಚು ಹಾಕಿಕೊಂಡು ನಮ್ಮ ಹುಳುಕನ್ನು ಕಂಡುಹಿಡಿಯಲು ಹವಣಿಸುತ್ತಿದ್ದಾರೆ. ಯಾವ ವೇಳೆಗೆ ಯಾರ ಮನಸ್ಸಿನಲ್ಲಿ ಎಂತಹ ವಿಕಲ್ಪವು ಉಂಟಾದೀತೋ ಹೇಳಲಿಕ್ಕಾಗದು. ಪರಮಭಟ್ಟಾರಕ! ಗುಟ್ಟು ರಟ್ಟಾದರೆ ಕೆಲಸವು ಕೆಟ್ಟುಹೋಗುವುದು. ”

ಮಹಾವೀರನು ಒಂದು ನಿಮಿಷ ಸುಮ್ಮನಿದ್ದು, ನಿಧಾನವಾಗಿ ಮೆದು ವಾಗಿ ನುಡಿದನು; “ ನಿಜ ಸುಗುಪ್ತಾ! ಈ ದಂಡಯಾತ್ರೆ ಪರಿಸಮಾಪ್ತ ವಾಗುವವರೆಗೆ ನೀನೊಬ್ಬ ಸಾಹಸೀ ಗುಪ್ತಚಾರನೆಂದೇ ನಾನು ನಿನ್ನೊಡನೆ

ನಡೆದುಕೊಳ್ಳಬೇಕಾಗಿದೆ. ನಿನ್ನ ಹೆಸರು ಸುಗುಪ್ತ. ಅದಿರಲಿ, ವಿಶೇಷ ಸಮಾಚಾರಗಳೇನು ?"

"ಅವುಗಳನ್ನು ಸವಿಸ್ತರ ವಿದಿತಪಡಿಸುವುದಕ್ಕಾಗಿಯೇ ನಾನು ಈ ರಾತ್ರಿಯಲ್ಲಿ ತಮ್ಮ ಬಳಿಗೆ ಬಂದಿದ್ದೇನೆ."

"ಹೇಳು ಹಾಗಾದರೆ; ಕುಳಿತುಕೋ"

ಸುಗುಪ್ತನು ಪಕ್ಕದ ಒಂದು ಆಸನದಲ್ಲಿ ಕುಳಿತು ಹೇಳಲಾರಂಭಿಸಿದನು:

"ಪರಮಭಟ್ಟಾರಕ! ನಮ್ಮ ವ್ಯೂಹವು ಹೆಚ್ಚು ಹೆಚ್ಚು ಸಫಲವಾಗುತ್ತ ನಡೆದಿದೆ. ಇದು ಮಹಾವರಾಹನ ಕೃಪೆಯೆಂದೇ ಹೇಳಬೇಕು. ಶತ್ರು ಸ್ವಲ್ಪ ಸಮಯದಲ್ಲಿ ನಮ್ಮ ಅಂಕೆಗೆ ಬರುವ ನಿಶ್ಚಿತ ಚಿನ್ಹಗಳು ಗೋಚರ ವಾಗ ತ್ತಿವೆ."

"ಅದು ಹೇಗೆ ಸುಗುಪ್ತಾ ?" ಪರಮಭಟ್ಟಾರಕನು ನಸು ಆತುರ ನಾಗಿಯೇ ಕೇಳಿದನು.

ಸುಗುಪ್ತನು ಹೇಳತೊಡಗಿದನು :

"ಪರಮಭಟ್ಟಾರಕ ! ತಮ್ಮ ಅಪ್ಪಣೆಯಂತೆ ಈ ದಂಡಯಾತ್ರೆ ಹೊರಡುವ ಮುಂಚಿನಿಂದ ನಾನೀ ವ್ಯೂಹದ ಪೂರ್ವಸಿದ್ಧತೆಯನ್ನು ಮಾಡಿದ ವಿಷಯ ತಮಗೆ ವೇದ್ಯವೇ ಆಗಿದೆ. ತಾವು ರಾಜಧಾನಿಯಿಂದ ಹೊರಬೀಳು ವುದಕ್ಕೆ ಇನ್ನೂ ಒಂದು ತಿಂಗಳಿರಲು ನಾನು ಈ ಕಡೆಗೆ ಪಯಣ ಬೆಳೆಸಿದೆನು. ಈ ಭಾಗದ ಸ್ಥಿತಿಗತಿಗಳನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳಬೇಕು, ಮತ್ತು ಶತ್ರುಪಕ್ಷದ ಮರ್ಮಸ್ಥಳಗಳನ್ನು ಕಂಡುಹಿಡಿಯಬೇಕು; ಇವು ನನ್ನ ಪಯಣದ ಮುಖ್ಯ ಉದ್ದೇಶಗಳಾಗಿದ್ದುವು.

"ನಾನು ಮೊದಲು ಚೇದಿಮಂಡಲಕ್ಕೆ ಹೋದೆನು. ಅಲ್ಲಿಯ ಅರಸರಾದ ಕಲಚುರಿಗಳು ತಮ್ಮ ಬಂಧುಗಳು. ಅವರ ರಕ್ತದ ಒಂದು ಭಾಗವು ತಮ್ಮ ಧಮನಿಗಳಲ್ಲಿ ಹರಿದಾಡುತ್ತಿದೆ. ತಮ್ಮ ಮಾತೃಶ್ರೀ ಜೊಂಥಾದೇವಿಯ ತಂದೆ ಲಕ್ಷ್ಮಣರಾಜ; ಆತನ ತಮ್ಮ ಯುವರಾಜ. ಈ ಯುವರಾಜನು ಇದೀಗ ಚೇದಿರಾಜ್ಯದ ಸೂತ್ರಚಾಲಕನಾಗಿದ್ದಾನೆ. ಈತನಿಂದ ನನ್ನ ಕಾರ್ಯದಲ್ಲಿ

ಬಹಳ ಸಹಾಯವಾಯಿತು. ಕಲಚುರಿರಾಜನಾದ ಯುವರಾಜನಿಗೂ ಮಾಳವದ ಅಧಿಪತಿಯಾದ ಪರಮಾರ ಕುಲದ ವಾಕ್ಪತಿ ಮುಂಜರಾಜನಿಗೂ ಬದ್ಧ ವೈರ."

ಇಷ್ಟು ಹೇಳಿ ಸುಗುಪ್ತನು ಒಂದು ನಿಮಿಷ ಸುಮ್ಮನಾದನು. ಈತನ ಮಾತುಗಳಲ್ಲಿ ಹೊಸದೇನೂ ಇರಲಿಲ್ಲ. ಆದರೂ ಹೇಳುವವನ ಉತ್ಸಾಹ ವನ್ನೂ ವಾಕ್ಚಾತುರಿಯನ್ನೂ ಕುಗ್ಗಿಸಬಾರದೆಂದು ನೆನೆದು ಪರಮಭಟ್ಟಾರ ಕನು, "ಸರಿ, ಮುಂದೇನು?" ಎಂದು ಉತ್ತೇಜನದ ನುಡಿಗಳನ್ನು ಆಡಿದನು.

ಸುಗುಪ್ತನು ನಿರೂಪಣೆಯನ್ನು ಮುಂದುವರಿಸಿದನು:

"ಚೇದಿ ಮಂಡಲದಲ್ಲಿರುವಾಗ ಮುಂಜರಾಜನ ವಿಚಾರದಲ್ಲಿ ಅನೇಕ ಅಂತಃಸ್ಥ ಸಂಗತಿಗಳು ನನಗೆ ವಿದಿತವಾದುವು. ಮುಂಜರಾಜನ ಜೀವನದ ಎಷ್ಟು ಭಾಗವು ಆತನ ಉಜ್ವಲಗುಣಗಳಿಂದ ಪ್ರಕಾಶಮಾನವಾಗಿದೆಯೋ, ಅಷ್ಟೇ ಭಾಗವು ವಿರುದ್ಧ ಗುಣಗಳ ಅಂಧಕಾರದಿಂದ ಆಚ್ಛಾದಿತವಾಗಿದೆ ಯೆಂದು ನನಗೆ ತಿಳಿದುಬಂದಿತು. ಆತನ ಸತ್ಕರ್ಮಗಳು ಕಾಂತಿಪೂರ್ಣ ಚಂದ್ರನಂತೆ ರಾರಾಜಿಸುತ್ತಿರುವಾಗ ದುಷ್ಕರ್ಮಗಳ ಕೇತು ಅಡ್ಡಬರಲು ಖಗ್ರಾಸ ಗ್ರಹಣವು ಉಂಟಾಗಲು ತಡವಾಗುವಂತಿಲ್ಲ.

"ಮುಂಜರಾಜನಲ್ಲಿ ರಾಜನ ಘನತೆಯಿದೆ. ಆದರೆ ಉತ್ತಮ ನೃಪ ನೀತಿಗೂ ಕುಶಲರಾಜ್ಯ ವ್ಯವಹಾರಕ್ಕೂ ಆತನು ಪರಾಙ್ಮುಖನಾಗಿದ್ದಾನೆ. ಮುಂಜರಾಜನಲ್ಲಿ ಯೋಧನ ಸಾಹಸವಿದೆ; ಆದರೆ ವೀರನ ಪರಾಕ್ರಮವಿಲ್ಲ. ಮುಂಜರಾಜನು ವಿದ್ಯೆಯ ತವರಾಗಿದ್ದಾನೆ. ಅದಕ್ಕಾಗಿ ಆತನಿಗೆ ವಾಕ್‌ಪತಿ ಎಂಬ ಗೌರವದ ಬಿರುದೂ ಪ್ರಾಪ್ತವಾಗಿದೆ. ಹೀಗಿದ್ದರೂ ವಿದ್ಯೆಯ ಜೊತೆಗೆ ಆತನ ಅಂತಃಕರಣವು ಪರಿಪಕ್ವವಾಗಿ ಅದರಲ್ಲಿ ಗಾಂಭೀರ್ಯ, ನಿಶ್ಚಯ ಬುದ್ಧಿ ಮತ್ತು ಪವಿತ್ರ ಭಾವನೆ ಇವು ಬೆಳೆದುಕೊಂಡು ಬರಲು ಇನ್ನೂ ಅವಕಾಶವಿದೆ. ಮುಂಜರಾಜನ ಕಲಾಪ್ರೀತಿ, ರಸಿಕರನ್ನು ಮೆಚ್ಚಿಸಿದರೂ ಈ ವಯಸ್ಸಿನಲ್ಲಿಯೂ ಆತನನ್ನು ಬೆನ್‌ಬಿಡದ ಶೃಂಗಾರ ವಿಲಾಸಗಳು ಹಾಸ್ಯಾಸ್ಪದವಾಗುತ್ತಿವೆ. ಮುಂಜರಾಜನ ಕರ್ತೃತ್ವವು ಆತನ ರಾಷ್ಟ್ರಕ್ಕೆ

ಅಭ್ಯುದಯದ ಮಾರ್ಗವನ್ನು ತೋರಿಸಿದ್ದರೂ ಆತನ ಚಂಚಲ ಮತ್ತು ಸ್ವೇಚ್ಛೆಯ ವೃತ್ತಿಯಿಂದ ಆ ದಾರಿ ಮಸಕಾಗಿದೆ. ಮುಂಜರಾಜನಿಂದ ಮೆಚ್ಚು, ಕಾಣಿಕೆ, ಸಂಭಾವನೆಗಳನ್ನು ಪಡೆದು ಉಪಕೃತರಾದ ಕವಿಗಳೂ ಯಾಚಕರೂ ಆತನನ್ನು ಹಾಡಿ ಹರಿಸುತ್ತಿರುವರು. ಅದರ ಜೊತೆಗ ಆತನ ಅವಿಚಾರದ ಅಪಕೃತಿಯಿಂದ ಗಾಸಿಗೊಂಡು ನೊಂದ ನೂರಾರು ಜನರು ಆತನನ್ನು ಶಪಿಸುತ್ತಿರುವರು.

"ಮುಂಜರಾಜನಿಗೆ ಮಾಳವದ ರಾಜ್ಯಪದವಿ ಹೇಗೆ ಲಭ್ಯವಾಯಿತು ಎಂಬ ವಿಷಯದಲ್ಲಿ ಒಂದು ಗೂಢ ಕತೆಯಿದೆ. ಅದನ್ನು ತಾವು ಕೇಳಿರಬಹುದು."

ಸುಗುಪ್ತನು ನಿರೂಪಣೆಯ ಮತ್ತೊಂದು ಘಟ್ಟಕ್ಕೆ ಬಂದು ನಿಂತನು.

"ಎಂದೋ ಒಮ್ಮೆ ಕೇಳಿರಬಹುದು. ಈ ಸಂದರ್ಭದಲ್ಲಿ ನಿನ್ನ ಮುಖದಿಂದ ಕೇಳುವುದರಲ್ಲಿ ಸ್ವಾರಸ್ಯವಿದೆ. ಹೇಳು, ಸುಗುಪ್ತಾ!" ಪರಮ ಭಟ್ಟಾರಕರನು ಜಿಜ್ಞಾಸೆಯನ್ನು ತೋರಿದನು.

[ ೩ ]

ಸುಗುಪ್ತನು ಮತ್ತೆ ಹೇಳಲನುವಾದನು:

"ಪರಮಭಟ್ಟಾರಕ! ಕೇಳಿ. ಮುಂಜರಾಜನ ತಂದೆ ಪರಮಾರವಂಶದ ಸೀಯಕ. ಆದರೆ ಮುಂಜನು ಮಾತ್ರ ಸೀಯಕನ ಸ್ವಂತ ಮಗನಲ್ಲ; ಸಾಕು ಮಗನಂತೆ. ಮಾಳವರಾಜ ಸೀಯಕನಿಗೆ ಬಹುಕಾಲ ಮಕ್ಕಳಿರಲಿಲ್ಲ. ಒಂದು ದಿನ ಬೇಟೆಗೆ ಹೋದಾಗ ಅಡವಿಯಲ್ಲಿ ಆತನಿಗೊಂದು ಮಗು ದೊರೆತಿತು. ಅದು ಮುಂಜ ಎಂಬ ಹುಲ್ಲಿನಲ್ಲಿ ಬಿದ್ದುಕೊಂಡಿತ್ತು. ಸೀಯಕನು ಆ ಮಗುವನ್ನು ಎತ್ತಿ ತನ್ನ ಅರಮನೆಗೆ ತಂದು ಸಂರಕ್ಷಣೆ ಮಾಡಿದನು. ಮುಂಜ ಎಂಬ ಹೆಸರಿನ ಹುಲ್ಲಿನಲ್ಲಿ ದೊರೆತುದರಿಂದ ಆ ಮುಂಜ ಎಂಬ ಹೆಸರೇ ಈ ಬಾಲಕನಿಗೆ ಬಳಕೆಯಾಯಿತಂತೆ. ಮುಂದೆ ಸೀಯಕರಾಜನಿಗೆ ಸಿಂಧುರಾಜ ಎಂಬ ಮಗನು ಹುಟ್ಟಿದನು. ಆದರೂ ಸೀಯಕನು ಮುಂಜನನ್ನು ತನ್ನ ಸಾಕ್ಷಾತ್ ಹಿರಿಯ ಮಗನಂತೆ ಪ್ರೀತಿಯಿಂದ ಪಾಲನಮಾಡಿದನು. ಆತನು

ಮುಂಜನನ್ನೇ ತನ್ನ ರಾಜ್ಯದ ಉತ್ತರಾಧಿಕಾರಿಯಾಗಿ ನೇಮಿಸಲು ಬಗೆದನಂತೆ.

"ಈ ವಿಷಯವನ್ನು ಮುಂಜನಿಗೆ ತಿಳಿಸಬೇಕೆಂದು ಸೀಯಕನು ಒಂದು ದಿನ ಆತನ ಅಂತಃಪುರಕ್ಕೆ ಬಂದನು. ಅಲ್ಲಿ ಬೇರೆ ಯಾರೂ ಇಲ್ಲವೆಂದು ಸೀಯಕನು ತಿಳಿದುಕೊಂಡನು. ಇವರೆ ಮುಂಜನ ಅರ್ಧಾಂಗಿ ಅಲ್ಲಿಯೇ ಇದ್ದಳಂತೆ. ಸೀಯಕನು ಬರುವುದನ್ನು ನೋಡಿ ಮುಂಜನು ಅವಳನ್ನು ಮಂಚದ ಮರೆಯಲ್ಲಿ ಅಡಗಿಸಿಟ್ಟನು. ಸೀಯಕನು ಮುಂಜನಿಗೆ ಆತನ ಜನ್ಮ ವೃತ್ತಾಂತವನ್ನು ನಿವೇದಿಸಿದನು. ತನ್ನ ರಾಜ್ಯವು ಆತನಿಗೇ ಸಲ್ಲುವುದು ಎಂದು ಹೇಳಿದನು. ಮುಂಜನು ಮಾತ್ರ ತನ್ನ ತಮ್ಮ ಸಿಂಧುರಾಜನನ್ನು ಪ್ರೀತಿಯಿಂದ ನೋಡಿಕೊಳ್ಳಬೇಕೆಂದು ಸೀಯಕನು ಆತನಿಂದ ವಚನವನ್ನು ತೆಗೆದುಕೊಂಡನು. ಅನಂತರ ಮುಂಜನಿಗೆ ಮಾಳವದ ಸಿಂಹಾಸನವು ದೊರೆತಿತು. ಆದರೆ ಆತನು ತನ್ನ ಸಾಕುತಂದೆಗೆ ಕೊಟ್ಟ ವಚನವನ್ನು ಪಾಲಿಸಲಿಲ್ಲ. ಮಾತ್ರವಲ್ಲ, ತಾನು ಮಾಳವರಾಜ್ಯಕ್ಕೆ ನಿಜವಾಗಿ ಬಾಧ್ಯಸ್ಥನಲ್ಲ ಎಂಬ ಗುಟ್ಟು ತನ್ನ ಪತ್ನಿಯ ಮೂಲಕ ಹೊರಗೆ ಬಿದ್ದೀತೆಂಬ ಶಂಕೆಯಿಂದ ಆತನು ಆಕೆಯನ್ನು ಕೊಲ್ಲಿಸಿದನಂತೆ. ಇದನ್ನು ನೋಡಿದರೆ ತನ್ನ ಸ್ವಾರ್ಥಕ್ಕಾಗಿ ಎಂತಹ ಅಧಮ ಕೃತಿಗೂ ಹೇಸಲಾರದ ಮುಂಜನ ಹೀನ ಸ್ವಭಾವವು ವ್ಯಕ್ತವಾಗುತ್ತದೆ."

"ಹೀಗಿದ್ದರೆ ವಿದ್ಯಾವಂತಿಕೆಯ ಜೊತೆಯಲ್ಲಿ ಕುಟಿಲ ಚಾಣಕ್ಯ ನೀತಿಯೂ ಮುಂಜರಾಜನಲ್ಲಿ ಮನೆಮಾಡಿಕೊಂಡಿದೆ ಎಂದಂತಾಯಿತು. ಆತನ ಅರಮನೆಯ ತಂತ್ರಗಳು ಬಹು ವಿಲಕ್ಷಣವಾಗಿವೆ, ಸುಗುಪ್ತಾ!" ಪರಮಭಟ್ಟಾರಕನು ಆಶ್ಚರ್ಯವನ್ನು ವ್ಯಕ್ತಮಾಡಿದನು.

"ಪರಮಭಟ್ಟಾರಕ! ಮುಂಜರಾಜನ ವಿಷಯದಲ್ಲಿ ಇನ್ನೊಂದು ಕಥೆ ಹೀಗೆಯೇ ವಿಸ್ಮಯಕಾರಕವಾಗಿದೆ. ಮುಂಜರಾಜನ ತಮ್ಮ ಸಿಂಧುರಾಜ; ಸಿಂಧುರಾಜನ ಮಗ ಭೋಜ. ರಾಜಕುಮಾರ ಭೋಜನು ಚಿಕ್ಕಂದಿನಿಂದ ಕುಶಾಗ್ರಬುದ್ಧಿಯೂ ವಿದ್ಯಾಪಾರಂಗತನೂ ಆಗಿದ್ದನು. ಭೋಜನ ವಿದ್ವತ್ತ್ವ ಮತ್ತು ಕವಿತ್ವದ ಕೀರ್ತಿ ಮುಂಜರಾಜನಲ್ಲಿ ಮತ್ಸರಾಗ್ನಿಯನ್ನು ಹುಟ್ಟಿಸಿತು.

ಮುಂದೆ ಒಬ್ಬ ಜ್ಯೋತಿಷಿ ಬಂದು, “ನಿನ್ನ ತರುವಾಯ ಮಾಳವದ ಸಿಂಹಾಸನವು ನಿನ್ನ ಮಕ್ಕಳಿಗಾಗದೆ ಕುಮಾರ ಭೋಜನ ಪಾಲಾಗುವುದು!” ಎಂದು ಮುಂಜರಾಜನಿಗೆ ಹೇಳಿದನಂತೆ. ಇದರಿಂದ ಮುಂಜರಾಜನ ಹೊಟ್ಟೆ ಉರಿಯಿತು. ಆತನು ಗುಪ್ತವಾಗಿ ಕೊಲೆಗಡಕರನ್ನು ಕರೆಯಿಸಿ ಭೋಜನನ್ನು ಕಾಡಿನಲ್ಲಿ ಎತ್ತಿಕೊಂಡು ಹೋಗಿ ಕೊಲ್ಲುವಂತೆ ಅಪ್ಪಣೆ ಮಾಡಿದನಂತೆ. ಕೊಲೆಗಡಕರ ಕೈಯಲ್ಲಿ ಸಿಕ್ಕಿದ ಭೋಜನು ಅವರಿಗೆ, ತಾನು ಕೊಡುವ ಒಂದು ಓಲೆಯನ್ನು ಮುಂಜರಾಜನಿಗೆ ಮುಟ್ಟಿಸುವಂತೆ ಬೇಡಿಕೊಂಡನು. ರಾಜಕುಮಾರ ಭೋಜನ ದುಃಸ್ಥಿತಿಗಾಗಿ ಕನಿಕರ ಹುಟ್ಟಿದ ಕೊಲೆಗಡಕರು ಹಾಗೆ ಮಾಡಲು ಒಪ್ಪಿದರು. ಭೋಜನು ಮುಂಜರಾಜನಿಗೆ ಬರೆದು ಕಳುಹಿದ ಓಲೆಯಲ್ಲಿ ಒಂದು ಸಂಸ್ಕೃತ ಪದ್ಯವಿದ್ದಿತು. ಆ ಪದ್ಯವು ಹೀಗೆ:

ಮಾಂಧಾತಾ ಸ ಮಹೀಪತಿಃ ಕೃತಯುಗಾಲಂಕಾರಭೂತೋ ಗತಃ ।
ಸೇತುರ್ಯೇನ ಮಹೋದಧೌ ವಿರಚಿತಃ ಕ್ವಾಸೌ ದಶಾಸ್ಯಾಂತಕಃ ।
ಅನ್ಯೇಚಾಪಿ ಯುಧಿಷ್ಠಿರಪ್ರಭೃತಯೋ ಯಾತಾ ದಿವಂ ಭೂಪತೇ ।
ನೈಕೇನಾಪಿ ಸಮಂಗತಾ ವಸುಮತೀ ಮನ್ಯೇ ತ್ವಯಾ ಯಾಸ್ಯತಿ ॥

[ಕೃತಯುಗಕ್ಕೆ ಅಲಂಕಾರನಾದ ಆ ಮಾಂಧಾತ ಚಕ್ರವರ್ತಿಯು ಎಲ್ಲಿ? ಮಹಾಸಾಗರದ ಮೇಲೆ ಸೇತುವೆಯನ್ನು ನಿರ್ಮಿಸಿದ ಆ ರಾವಣಾಂತಕ ಶ್ರೀ ರಾಮಚಂದ್ರನು ಎಲ್ಲಿ? ಧರ್ಮರಾಜನೇ ಮೊದಲಾದ ಆ ಮಹಾ ಮಹಾ ರಾಜರ್ಷಿಗಳು ಎಲ್ಲಿ? ಈ ಭೂಮಿಯು ಒಡೆತನವು ಅವರೊಬ್ಬರ ಜೊತೆಗೂ ಹೋಗಲಿಲ್ಲವಲ್ಲ! ಅದು ನಿನ್ನೊಬ್ಬನ ಸಂಗಡ ಮಾತ್ರ ಹೋಗುವುದೋ ಏನೋ!]

“ಈ ಪದ್ಯವನ್ನು ಓದಿ ಲಜ್ಜಿತನಾದ ಮುಂಜರಾಜನು ಕುಮಾರ ಭೋಜನನ್ನು ಕಾಡಿನಿಂದ ಅರಮನೆಗೆ ಬರಮಾಡಿಕೊಂಡನಂತೆ.”

“ಭಲಾ! ಇಂತಹ ಸೂಕ್ಷ್ಮ ಸಂಗತಿಗಳೆಲ್ಲ ನಿನಗೆ ಹೇಗೆ ಗೊತ್ತಾದುವು, ಸುಗುಪ್ತಾ?” ಪರಮಭಟ್ಟಾರಕನು ಕುತೂಹಲದಿಂದ ಪ್ರಶ್ನೆ ಮಾಡಿದನು.

“ಪರಮಭಟ್ಟಾರಕ! ಈ ಮುಂದೆ ಹೇಳುವ ಸಂಗತಿಗಳು ಇನ್ನೂ ರಹಸ್ಯಮಯವಾಗಿವೆ. ಚಿತ್ತಯಿಸಬೇಕು.” ಎಂದು ಹೇಳಿ ಸುಗುಪ್ತನು ವಿವರಿಸಿದನು :

ಇದ್ದುಕೊಂಡು ಸಂಸ್ಕೃತವನ್ನು ಅಧ್ಯಯನ ಮಾಡಿದ ವಿಷಯ ತನಗೆ ತಿಳಿದಿರಲು ಸಾಕು. ”

“ ಸರಿ, ಮುಂದೇನು ಸುಗುಪ್ತಾ ? ”

“ ಪರಮಭಟ್ಟಾರಕ ! ಮಾಳವದಿಂದ ನಾನು ಮತ್ತೆ ಚೇದಿರಾಜ್ಯಕ್ಕೆ ಹೋದೆನು. ನಾನು ಮಾಳವಕ್ಕೆ ಹೋದುದರಿಂದ ಉಂಟಾದ ಹೆಚ್ಚಿನ ಲಾಭವೆಂದರೆ ಚಿತ್ರಾಂಗದನ ಗಾಢಸ್ನೇಹ. ಈಗ ಆತನು ನನ್ನ ಪರಮ ಮಿತ್ರನು. ಆತನು ಮೇಲೆ ಮೇಲೆ ಮುಂಜರಾಜನ ವಿಶ್ವಾಸದಲ್ಲಿ ಇದ್ದಂತೆ ತೋರಿದರೂ ಒಳಗೊಳಗೆ ಮುಂಜರಾಜನ ಮೇಲಿನ ಆತನ ಹೊಟ್ಟೆಯುರಿ ಕಡಿಮೆಯಾಗಿಲ್ಲ. ಮುಂಜರಾಜನ ನಾಶಕ್ಕಾಗಿ ಆತನು ನಮಗೆ ಬೇಕಾದ ಸಹಾಯ ಮಾಡಲು ಸಿದ್ಧನಿರುವನು. ”

“ ಸುಗುಪ್ತಾ ! ಇಷ್ಟು ಪರಿಯಿಂದ ಆತನು ನಮ್ಮ ಸ್ನೇಹಿತನಾದುದರ ಇಂಗಿತವೇನು ? ನೀನು ಆತನಿಗೆ ಯಾವ ಆಸೆಯನ್ನು ತೋರಿಸಿರುವೆ ? ”

“ ಪರಮಭಟ್ಟಾರಕ ! ಆತನೊಬ್ಬ ಸುಖಲೋಲುಪ. ಮೇಲಾಗಿ ಆತನಿಗೆ ಕರ್ನಾಟಕದಲ್ಲಿ ಆಸಕ್ತಿ. ಕರ್ನಾಟಕದ ತಿಂಡಿತೀರ್ಥಗಳು ಆತನಿಗೆ ಬಹಳ ರುಚಿಸುತ್ತವೆಯಂತೆ. ಕರ್ನಾಟಕದ ಯುವತಿಯರಿಗೆ ಆತನು ಮರುಳಾಗಿದ್ದಾನೆ. ಕರ್ನಾಟಕದ ಕನ್ಯೆಯನ್ನು ಮದುವೆ ಮಾಡಿಕೊಂಡು ಸ್ಥಿತಿವಂತನಾಗಿ ನಮ್ಮ ರಾಜ್ಯದಲ್ಲಿ ನೆಲಸಬೇಕೆಂದು ಆತನು ಬಯಸುತ್ತಿದ್ದಾನೆ. ಈ ಬಯಕೆಗೆ ನಾನು ಧೂಪ ಹಾಕಿದ್ದೇನೆ. ”

“ ಆತನೇನು ವಯಸ್ಸಿನಲ್ಲಿ ಇನ್ನೂ ಪ್ರಾಯದವನೇ ? ”

“ ಹಾಗಲ್ಲ, ಪರಮಭಟ್ಟಾರಕ ! ನಡುಹರೆಯವನ್ನು ದಾಟಿದ್ದಾನೆ. ಆದರೆ ಮುಂಜರಾಜನ ಅರಮನೆಯಲ್ಲಿದ್ದ ಆತನ ವಿಲಾಸೀ ವೃತ್ತಿ ವೃದ್ಧಿಂಗತವಾಗಿದೆ. ನಾವೀ ಸಂಗ್ರಾಮದಲ್ಲಿ ಜಯಶೀಲರಾದರೆ ಆತನಿಗೊಂದು ಮಂಡಲಾಧಿಕಾರವನ್ನು ಕೊಡುವುದಾಗಿ ಮಾತು ಕೊಟ್ಟಿದ್ದೇನೆ. ”

“ ಅದಿರಲಿ, ಸುಗುಪ್ತಾ ! ಪ್ರಾಣಾಪಾಯಕರವಾದ ಇಂತಹ ಸಾಹಸಗಳಲ್ಲಿ ನೀನು ಆತ್ಮರಕ್ಷಣೆಯ ಉಪಾಯವನ್ನೇನಾದರೂ ಮಾಡಿಕೊಂಡಿದ್ದೆಯಾ ? ”

"ಅಹುದು, ಪರಮಭಟ್ಟಾರಕ! ಮಾಡಿಕೊಂಡಿದ್ದೇನೆ. ಕಲಚುರಿ ಯುವರಾಜನ ಗುಪ್ತಭಟರು ಯಾವಾಗಲೂ ನನ್ನ ಬೆಂಗಾವಲಿಗೆ ಇದ್ದು ನನ್ನ ಸಂಚಾರಗಳಲ್ಲಿ ಸಹಾಯಮಾಡುತ್ತಾರೆ. ಈ ಹೊಳೆಯ ಆಚೆಯಿಂದ ಈಚೆಗೂ ಈಚೆಯಿಂದ ಆಚೆಗೂ ಬರುಹೋಗುವಲ್ಲಿ ಮುಖ್ಯವಾಗಿ ಆ ಭಟರ ಭದ್ರವಾದ ಸಂರಕ್ಷಣೆ ನನಗೆ ಇರುತ್ತದೆ. ಚೇದಿರಾಜ್ಯವನ್ನು ಬಿಟ್ಟು ನಾನು ಇತ್ತ ಬರುವಂದಿನ ಹೊಸ ಸಮಾಚಾರವು ಹೀಗೆ: ಮುಂಜರಾಜನು ಈ ನಮ್ಮ ದಂಡಯಾತ್ರೆಯ ವ್ಯೂಹದಿಂದ ಕ್ಷುಬ್ಧನಾಗಿದ್ದಾನಂತೆ. ಬೇಗನೆ ಹೊಳೆಯನ್ನು ದಾಟಿ ನಮ್ಮ ಸೈನ್ಯದ ಮೇಲೆ ಆಕಸ್ಮಿಕವಾಗಿ ದಾಳಿ ಮಾಡಲು ನಿರ್ಧರಿಸಿದ್ದಾನಂತೆ. ಮಾತ್ರವಲ್ಲದೆ, ತಮ್ಮನ್ನು ಸೆರೆಹಿಡಿಯಲು ಹೊಂಚುಹಾಕಿದ್ದಾನಂತೆ!"

"ಹಾಂ, ಸುಗುಪ್ತಾ! ಏನು ಏನು? ಮುಂಜನು ನನ್ನನ್ನು ಸೆರೆಹಿಡಿಯಲು ಹವಣಿಸಿರುವನೇ! ಆಗಲಿ, ನೋಡುವ ಯಾರು ಯಾರನ್ನು ಸೆರೆಹಿಡಿಯುವರು!" ಪರಮಭಟ್ಟಾರಕನು ಕೆಂಪಡರಿದ ಕಣ್ಣುಗಳಿಂದ ಕಿಡಿಯನ್ನು ಕಾರುತ್ತ ಘನಗಭೀರವಾಗಿ ಗರ್ಜಿಸಿ ಹೀಗೆ ಮುಂದುವರಿದನು:

"ಆ ರಾಷ್ಟ್ರಕೂಟರು, ಬಲಶಾಲಿಗಳಾದ ಆ ಚೋಳರು, ಲಾಟದೇಶದ ಅರಸರು, ಗಿರಿದುರ್ಗ-ವನದುರ್ಗ-ಜಲದುರ್ಗಗಳಿಂದ ಅಭೇದ್ಯವೆಂದೆನಿಸಿದ ರಾಜ್ಯಗಳ ಒಡೆಯರು, ಇಂತಹ ಇನ್ನೂ ಅನೇಕ ವಿರೋಧಿ ನೃಪರು ನನ್ನನ್ನು ಪ್ರತಿಭಟಿಸಿ ಯಾವ ದಾರಿಗೆ ಹೋದರೋ, ಅದೇ ದಾರಿ ಮುಂಜ ಹುಲ್ಲಿನಲ್ಲಿ ಹುಟ್ಟಿದ ಈ ಮುಂಜನಿಗಾಗಿ ಕಾದಿದೆ! ಇದರಲ್ಲಿ ಸಂದೇಹವಿಲ್ಲ. ಮತ್ತೇನು, ಸುಗುಪ್ತಾ?"

"ಪರಮಭಟ್ಟಾರಕರು ಅಪ್ಪಣೆ ಕೊಡಿಸಬೇಕು. ಇರುಳು ಸರಿಹೊತ್ತಿಗೆ ಸರಿಯುತ್ತದೆ. ಮತ್ತೆ ಬರುವೆ."

"ಆಗಬಹುದು."

ಸುಗುಪ್ತನು ಶಿಬಿರದಲ್ಲಿಯ ಆ ಮಹಾವರಾಹ ವಿಗ್ರಹಕ್ಕೆ ವಂದನೆಗಳನ್ನು ಸಲ್ಲಿಸಿ ಹೊರಟು ಹೋದನು.

ಮಹಾವರಾಹನ ಭಕ್ತನಾದ ಈ ಪರಮಭಟ್ಟಾರಕನು ಯಾರೆಂಬುದನ್ನು ಓದುಗರು ಈಗಾಗಲೇ ಕಂಡುಹಿಡಿದಿರಬಹುದು. ಈತನೇ ಚಲುಕ್ಯ ರಾಜ್ಯ ಪುನಃಸ್ಥಾಪಕ ತೈಲಪ ನರೇಂದ್ರ.

[ ೪ ]

ಇತಿಹಾಸಪ್ರಸಿದ್ಧವಾದ ಉಜ್ಜಯಿನೀ ಪಟ್ಟಣ. ಇದೀಗ ಮುಂಜರಾಜನ ಆಳಿಕೆಯಲ್ಲಿ ಮಾಳವದೇಶದ ರಾಜಧಾನಿಯಾಗುವ ಹೆಚ್ಚಿನ ಸೌಭಾಗ್ಯವನ್ನು ಪಡೆದಿದೆ. ಮುಂಜರಾಜನು ತನ್ನ ಅಂತಃಪುರದ ಒಂದು ವಿಶಾಲ ಗೃಹದಲ್ಲಿ ಸುಖಾಸನದ ಮೇಲೆ ವಿರಾಜಮಾನನಾಗಿದ್ದಾನೆ. ಆ ರಾಜಭವನದ ಭಿತ್ತಿಗಳು ಅನೇಕ ಸುಂದರ ಚಿತ್ರಪಟಗಳಿಂದ ಅಲಂಕೃತವಾಗಿವೆ. ಈ ಪಟಗಳಲ್ಲಿ ಹೆಚ್ಚಿನವು ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಮಾಲತೀಮಾಧವ, ಸ್ವಪ್ನವಾಸವದತ್ತ ಮೊದಲಾದ ನಾಮಾಂಕಿತ ಸಂಸ್ಕೃತ ನಾಟಕಗಳಲ್ಲಿಯ ಶೃಂಗಾರಿಕ ಸನ್ನಿವೇಶಗಳನ್ನು ಚಿತ್ರಿಸುವಂತಹವು. ಚೆಲುವಿನ ರೂಪು ಮತ್ತು ಬೆಡಗಿನ ಉಡುಪು ತೊಡಪುಗಳಿಂದ ಸೊಗಸಿಯಾದ ಸೇವಿಕೆಯೊಬ್ಬಳು ಚಿನ್ನದ ಪಾತ್ರೆಯಲ್ಲಿ ಯಾವುದೋ ಒಂದು ಪೇಯವನ್ನು ಮುಂಜರಾಜನಿಗೆ ಕುಡಿಸುತ್ತಿದ್ದಾಳೆ. ಸ್ಫುರದ್ರೂಪವತಿಯಾದ ಬೇರೊಬ್ಬ ಸೇವಿಕೆ ತಾಂಬೂಲದ ತಟ್ಟೆಯನ್ನು ಹಿಡಿದುಕೊಂಡು ಆತನ ಪಕ್ಕದಲ್ಲಿ ನಿಂತಿದ್ದಾಳೆ. ಮುಂಜರಾಜನ ಚಂಚಲ ಕಟಾಕ್ಷಗಳು ಆಕೆಯ ಮುಖದ ಮೇಲೆ ಸುಳಿಯುತ್ತಿರುವಾಗ ಆತನ ಮುಖದಿಂದ ಈ ಪದ್ಯಭಾಗವು ಸರಾಗವಾಗಿ ಹೊರಹೊಮ್ಮುತ್ತಿದೆ:

ಮಧು ಮಧುರಂ ದಧಿ ಮಧುರಂ ।
ದ್ರಾಕ್ಷಾ ಮಧುರಂ ಸುಧಾಪಿ ಮಧುರೈವ ॥

[ ಜೇನು ಸವಿ, ಮೊಸರು ಸವಿ, ದ್ರಾಕ್ಷೆ ಸವಿ, ಅಮೃತವೂ ಸವಿ. ]

ಮರುನಿಮಿಷದಲ್ಲಿ ಗಳಿಲನೆ ಗೀತವನ್ನು ನಿಲ್ಲಿಸಿ ಮುಂಜರಾಜನು ಕೇಳಿದನು: "ಏನು, ಚಿತ್ರಾಂಗದನು ಇನ್ನೂ ಬರಲಿಲ್ಲವೆ?"

"ಇಕೋ ನೋಡಿ, ಬಂದೇ ಬಿಟ್ಟರು. ಅವರಿಗೆ ಶತಮಾನದ ಆಯುಸ್ಸು." ಪಕ್ಕದ ಪರಿಚಾರಿಕೆ ನಸುನಗುತ್ತ ನುಡಿದಳು.

"ಚಿತ್ರಾಂಗದರೇ, ಹೀಗೆ ಬನ್ನಿ; ಕುಳಿತುಕೊಳ್ಳಿ." ಮುಂಜರಾಜನು ಸ್ವಾಗತಿಸಿದನು.

ಮುಂಜರಾಜನ ಸೂಚನೆಯನ್ನನುಸರಿಸಿ ಚಿತ್ರಾಂಗದನು ಒಳಗೆ ಬಂದು ಪ್ರಣಾಮ ಮಾಡಿ ಪಕ್ಕದ ಆಸನದ ಮೇಲೆ ಕುಳಿತುಕೊಂಡನು.

" ಏನು ಸಮಾಚಾರ, ಚಿತ್ರಾಂಗದರೇ? ಹೊಳೆಯನ್ನು ದಾಟುವ ಎಲ್ಲ ಸಿದ್ಧತೆ ಮುಗಿದಿದೆಯಷ್ಟೇ? ನಮ್ಮ ಸಕಲ ಸೈನ್ಯಕ್ಕೆ ಸಾಲುವಷ್ಟು ನಾವೆಗಳು ದೊರೆತಿವೆಯಲ್ಲವೆ ? " ಮುಂಜರಾಜನು ಪ್ರಶ್ನಿಸಿದನು.

" ಸಿದ್ಧತೆ ಮುಗಿದಿದೆ, ಮಹಾರಾಜ! ಆದಷ್ಟು ಬೇಗನೆ ನಾವೀ ಆಕ್ರಮಣ ಮಾಡುವದು ಕ್ಷೇಮಕರ. ಏಕೆಂದರೆ ಆ ಧೂರ್ತ ತೈಲಪನಿಗೆ ಇದರ ಸುಳಿವು ಗೊತ್ತಾದರೆ ಸಾಕು; ನಮ್ಮ ವ್ಯೂಹವೆಲ್ಲವೂ ವ್ಯರ್ಥ ವಾದೀತು. " ಚಿತ್ರಾಂಗದನು ವಿನಯದಿಂದ ಅರಿಕೆ ಮಾಡಿದನು.

" ಹಾಗಾದರೆ ನಮ್ಮ ಪ್ರಯಾಣ ಭೇರಿ ನಾಳಿನ ಪ್ರಭಾತದಲ್ಲಿಯೇ ಮೊಳಗಲಿ. ನಮ್ಮ ಸೈನ್ಯವು ಅತಿ ತ್ವರಿತಗತಿಯಿಂದ ಮಾರ್ಗಕ್ರಮಣ ಮಾಡಿ ಗೋದಾವರಿಯನ್ನು ಸಮೀಪಿಸಬೇಕಾಗಿದೆ. ಅಲ್ಲಿಂದ ಒಂದು ರಾತ್ರಿ ಆಚೆಯ ದಂಡೆಗೆ ನುಗ್ಗಿ ಆ ಕರ್ನಾಟಕರನ್ನು ಪುಡಿ ಪುಡಿ ಮಾಡುವೆ. ಚಿತ್ರಾಂಗದರೇ! ಈ ನಮ್ಮ ಅಭಿಯೋಗದ ಹೆಗ್ಗುರಿಯೇನೆಂಬುದು ನಿಮಗೆ ಪೂರ್ತಿ ಗೊತ್ತಿದೆಯಲ್ಲವೇ? " ಮುಂಜರಾಜನು ಆಧ್ಯತೆಯಿಂದ ಕೇಳಿದನು.

" ಗೊತ್ತಿದೆ, ಮಹಾರಾಜ! ತೈಲಪನ ಸೆರೆ, ತೈಲಪನ ಸೆರೆ, ತೈಲಪನ ಸೆರೆ. " ಚಿತ್ರಾಂಗದನು ನಿಶ್ಚಿತಸ್ವರದಿಂದ ಮೂರುಬಾರಿ ಒತ್ತಿ ಉಸುರಿದನು.

" ಭಲಾ, ಭಾಪು. ಅನಂಗಲತೇ! ಸಚಿವೋತ್ತಮ ಚಿತ್ರಾಂಗದರಿಗೆ ಆ ಮಧುರ ಪೇಯದ ಮಾಧುರ್ಯವನ್ನು ಕೊಂಚ ತೋರಿಸು, ನೋಡುವ. " ಮುಂಜರಾಜನು ಪೇಯಪಾತ್ರವನ್ನು ಹಿಡಿದಿದ್ದ ಸೇವಿಕೆಯನ್ನು ಸಂಬೋಧಿಸಿದನು.

" ಬೇಡ, ಬೇಡ; ನನಗೇಕೆ ಮಹಾರಾಜ! " ಎನ್ನುತ್ತ ಚಿತ್ರಾಂಗದನು ನಿಜವಾಗಿ ಬೇಡವಾದವನಂತೆ ನಟಿಸಿದನು.

" ಬೇಡವೆಂದರೆ ಬಿಟ್ಟುಬಿಡಲು ಅಷ್ಟು ಸುಲಭವೇ ಅದು? ಮಂತ್ರಿವರ ಚಿತ್ರಾಂಗದ! ನಿಮ್ಮಂತಹ ರಸಿಕ ಮಂತ್ರಿಗಳ ಸಹಾಯವು ನನಗೆ ಸದಾ ಲಭಿಸಿದರೆ ನನ್ನ ರಾಜಕೀಯ ಕಾರ್ಯಕಲಾಪಗಳು ಸುಖಸ್ವಪ್ನದಂತೆ ಹಗುರಾಗಿ ಜಾರಿ ಹೋಗುವುವು. ಇಲ್ಲವಾದರೆ ಆ ಮುದಿಗೂಬೆ—" ಎಂದು ಹೇಳಿ ಮುಂಜರಾಜನು ಅಷ್ಟಕ್ಕೆ ನಿಂತನು.

ಚಿತ್ರಾಂಗದನು ಆಸಂಗಲತೆ ಕೊಟ್ಟ ಪಾತ್ರೆಯನ್ನು ಅರೆನಿಮಿಷದಲ್ಲಿ ಬರಿದು ಮಾಡಿದನು. ಅದರಲ್ಲಿಯ ಪೇಯದ ಪ್ರಭಾವದಿಂದ ಉತ್ತೇಜಿತನಾಗಿ ಕತ್ತನ್ನು ಗಾತ್ರಮಾಡಿ ಕೂಗಿದನು: "ಮಹಾರಾಜ! ತಮ್ಮ ಪಾದದಾಣೆ ಮಾಡಿ ಹೇಳುತ್ತೇನೆ. ನಾಳಿನ ದಂಡಯಾತ್ರೆಯ ಗುರಿ ಕರ್ನಾಟಕದ ಆ ತಂತ್ರಗಾರ ತೈಲಪನ ಕೈಸೆರೆ. ಆತನು ಇನ್ನು ಮುಂದೆ ತನ್ನ ಶೇಷ ಆಯುಷ್ಯ ವನ್ನು ಈ ಉಜ್ಜಯಿನಿಯ ಅಭೇದ್ಯ ಕಾರಾಗೃಹದಲ್ಲಿ ವಾಸಮಾಡಿ ಮಹಾ ಕಾಲಸ್ವಾಮಿಯನ್ನು ಧ್ಯಾನಿಸುತ್ತ ಕಳೆಯಲಿ. ಹಾ; ತಂತ್ರಗಾರ ತೈಲಪನ ನಿಗಡಬಂಧನ!"

"ಮಂತ್ರಿವರ ಚಿತ್ರಾಂಗದ! ಈ ದಂಡಯಾತ್ರೆಯ ಸೂತ್ರಚಾಲಕತ್ವ ವನ್ನು ನಾನು ನಿಮಗೆ ಒಪ್ಪಿಸಿದ್ದೇನೆ. ನಿಮ್ಮ ಕರ್ತೃತ್ವ ಶಕ್ತಿಯಿಂದಲೇ ನನ್ನ ಸಂಕಲ್ಪವು ಸಫಲವಾಗುವುದು ಎಂಬಲ್ಲಿ ಸಂದೇಹವಿಲ್ಲ." ಮುಂಜ ರಾಜನು ಉತ್ಸಾಹದಿಂದ ಕೇಕೆ ಹಾಕಿದನು.

"ಪುನಶ್ಚ ತಮ್ಮ ಚರಣಕಮಲಗಳ ಶಪಥ ಮಾಡಿ ಹೇಳುತ್ತೇನೆ. ನಾನೀ ದಂಡಯಾತ್ರೆಯಲ್ಲಿ ಕರ್ನಾಟಕದ ಆ ಕುಟಿಲ ತೈಲಪನನ್ನು ಸಿಕ್ಕಿಸಿ ಹಾಕದಿದ್ದರೆ ನನ್ನ ಹೆಸರನ್ನೇ ತೊರೆದು ಬಿಡುವೆ. ಹಾ; ಅದೇನು ಮಹಾ? ತೈಲಪನು ಎಂದರೆ ಎಣ್ಣೆಯನ್ನು ಕುಡಿಯುವವ. ಎಣ್ಣೆಯನ್ನು ಕುಡಿದು ಡೊಣ್ಣೆಗಾಗಿ ಕಾಯ್ದಿದ್ದ ಆ ತೈಲಪನನ್ನು ಹಣ್ಣು ಮಾಡುವುದು ಎಷ್ಟರ ಕೆಲಸ?" ಚಿತ್ರಾಂಗದನು ಮಾತಿನ ಮಂಟಪನ್ನು ನಿಲ್ಲಿಸಿ ಏರುದನಿಯಲ್ಲಿ ಅಟ್ಟಹಾಸ ಬೀರಿದನು.

"ಭಾಪುರೇ ಭಾಪು! ಸಚಿವಶಾರ್ದೂಲ ಚಿತ್ರಾಂಗದರೇ, ಈ ಹೊತ್ತಿನಿಂದ ನಮ್ಮ ಮುಖ್ಯಮಂತ್ರಿಯು, ಮಹಾಮಂತ್ರಿಯು, ಪ್ರಧಾನ ಮಂತ್ರಿಯು, ಪಟ್ಟವು ನಿಮಗೆ ಮಾತ್ರ ಸಲ್ಲುತ್ತದೆ. ಆ ವೃದ್ಧ ಕಪಿಯ ಸಹವಾಸವೇ ಬೇಡ ನನಗೆ. ಏಕೋ ಈಗೀಗಂತೂ ಆತನ ಹೆಸರನ್ನು ಕೂಡ ಎತ್ತಿದರೆ ನನಗೆ ಆಗುವುದಿಲ್ಲ." ಮುಂಜರಾಜನು ಆವೇಶದಿಂದ ಹೇಳಿದನು.

ಅಷ್ಟರಲ್ಲಿ ಆ ಕಡೆ ಯಾರೋ ಅವಸರದಿಂದ ಓಡಿ ಬರುವ ಶಬ್ದವು ಕೇಳಿಸಿತು. ಓಡಿ ಬಂದವನು ಒಬ್ಬ ಸೇವಕ. ಆ ರಾಜಭವನದ ಬಾಗಿಲಿಗೆ

ಬಂದು, "ಮಹಾರಾಜರಿಗೆ ಅವಸರದ ಸಮಾಚಾರವನ್ನು ಅರುಹಬೇಕಾಗಿದೆ" ಎಂದು ದ್ವಾರಪಾಲಿಕೆಗೆ ತಿಳಿಸಿದನು. ಆಕೆ ಆತನ ಪ್ರಾರ್ಥನೆಯನ್ನು ಮುಂಜ ರಾಜನಿಗೆ ವಿದಿತಪಡಿಸಿದಳು. ರಾಜನ ಅಪ್ಪಣೆಯಂತೆ ಒಳಗೆ ಬಂದ ಸೇವಕನು ಕೈ ಜೋಡಿಸಿ ಅರಿಕೆ ಮಾಡಿದನು:

"ಮಹಾಸ್ವಾಮೀ! ಅಂತಃಪುರದ ಬಾಗಿಲಿಗೆ ಮಹಾಮಂತ್ರಿ ರುದ್ರ ಭಾನುಗಳು ಬಂದಿದ್ದಾರೆ. ಇದ್ದಕ್ಕಿದ್ದ ಹಾಗೆ ಕೂಡಲೆ ತಮ್ಮ ದರ್ಶನ ವಾಗಲೇಬೇಕೆಂದು ಹಟ ಹಿಡಿದಿದ್ದಾರೆ."

"ಯಾರು ಆ ಮ—, ಮಹಾಮಂತ್ರಿಗಳೇ? ಅವರು ಇಲ್ಲಿಗೆ ಹೇಗೆ ಬಂದರು? ಅವರಿಗೆ ದೇಹದಲ್ಲಿ ಆಲಸ್ಯವೆಂದು ಕೇಳಿದ್ದೆನಲ್ಲವೆ?" ರಾಜನು ಬೇಸರದಿಂದ ಪ್ರಶ್ನೆ ಮಾಡಿದನು.

"ಮಹಾಸ್ವಾಮೀ, ಮಹಾಮಂತ್ರಿಗಳೇ ಅವರು. ಪಲ್ಲಕ್ಕಿಯಲ್ಲಿ ಮಲಗಿಕೊಂಡು ಬಂದಿದ್ದಾರೆ. ಮೈಯಲ್ಲಿ ಜ್ವರ ಬಹಳವಿದೆ; ನಡುಗುತ್ತಿ ದ್ದಾರೆ, ನರಳುತ್ತಿದ್ದಾರೆ; ಆದರೂ ಈ ಕ್ಷಣದಲ್ಲಿ ತಮ್ಮ ದರ್ಶನವಾಗಲೇ ಬೇಕಂತೆ. ಇಲ್ಲವಾದರೆ "ಇಲ್ಲಿಯೇ ಬಿದ್ದು ಪ್ರಾಣ ಬಿಡುತ್ತೇನೆ" ಎಂದು ಆಕ್ರೋಶ ಮಾಡುತ್ತಿದ್ದಾರೆ. ಅವರ ಸ್ಥಿತಿ ಬಹು ಕರುಣಾಜನಕವಾಗಿದೆ, ಮಹಾಸ್ವಾಮೀ!" ಸೇವಕನು ದೈನ್ಯದಿಂದ ಬೇಡಿಕೊಂಡನು.

ರಾಜನು ಚಿತ್ರಾಂಗದನ ಕಡೆಗೆ ಹೊರಳಿ ನುಡಿದನು; "ಸಚಿ ವೋತ್ತಮರೇ, ಶಿವಪೂಜಾಕಾಲದಲ್ಲಿ ಕರಡಿ ಬಂದಂತಾಯಿತಲ್ಲವೇ? ಇದೇನು ಅನಾಹುತ! ಆ ಕಿರಾತ ತೊಲಗಿ ಹೋಗಿದ್ದರೆ ಚೆನ್ನಾಗಿತ್ತು. ಆದರೆ ಆತನು ತನ್ನ ದುರಾಗ್ರಹವನ್ನು ಬಿಡಲಾರನು. ಆಗಲಿ, ಕಂಡು ಸಾಂತನಾಡಿಸಿ ಕಳುಹುವ."

ಮುಂಜರಾಜನು ಆ ಸೇವಕನನ್ನು ಉದ್ದೇಶಿಸಿ, "ಸೋಮದತ್ತಾ, ರುದ್ರಭಾನುಗಳನ್ನು ಇಲ್ಲಿಗೆ ಕರೆದುಕೊಂಡು ಬಾ, ಜಾಗ್ರತೆಯಾಗಿ" ಎಂದು ಅಪ್ಪಣೆ ಮಾಡಿದನು.

ಸ್ವಲ್ಪ ಹೊತ್ತಿನಲ್ಲಿ ಮುಂಜರಾಜನ ವೃದ್ಧ ಮಹಾಮಂತ್ರಿ ರುದ್ರಭಾನು ತಡವರಿಸುತ್ತ ತೇಕುತ್ತ ಅಲ್ಲಿಗೆ ಬಂದನು. ಮುಂಜರಾಜ ಮತ್ತು ಚಿತ್ರಾಂಗ

ದರು ಕೈಹಿಡಿದು ಕರೆತಂದು ಆತನನ್ನು ಆಸನದಲ್ಲಿ ಕೂರಿಸಿದರು. ಸೇವಿಕೆಯರು ದೂರದಲ್ಲಿ ಸರಿದು ನಿಂತರು.

ರುದ್ರಭಾನು ಕೆಮ್ಮುತ್ತ ಕೆಮ್ಮುತ್ತ ಕ್ಷೀಣಸ್ವರದಿಂದ ಉಸುರಿದನು: "ವಾಕ್ಪತಿ ಮುಂಜರಾಜರು ಈ ವೃದ್ಧ ಸೇವಕನ ಕೊನೆಯ ಬಿನ್ನಪವನ್ನು ಆಲಿಸಬೇಕು. ತಾವು ಕರ್ನಾಟಕದ ಮೇಲೆ ದಂಡಯಾತ್ರೆಯ ಸಿದ್ಧತೆಯನ್ನು ಮಾಡಿರುವಿರಂತೆ, ನಿಜವೇ?"

"ರುದ್ರಭಾನುಗಳೇ, ಯಾರು ಹೇಳಿದರು ತಮಗೆ?" ಮುಂಜರಾಜನು ಹಾರಿಸಿಕೊಳ್ಳಲು ಹವಣಿಸಿದನು.

"ಯಾರೇಕೆ ಹೇಳಬೇಕು, ವಾಕ್ಪತೀ! ಊರಿಗೂರೇ, ನಾಡಿಗೆನಾಡೇ ಡಂಗುರ ಹೊಡೆಯುತ್ತಿರುವಾಗ, ಬೇರೆ ಸಾಕ್ಷಿಯೊಂದು ಬೇಕೇ?"

"ಇರಬಹುದು, ಮುಂದೆ?" ಮುಂಜರಾಜನು ಅಲಕ್ಷ್ಯವಾಗಿ ಕೇಳಿದನು.

"ಮುಂದೆ ಏನು ಎಂಬುದನ್ನು ಹೇಳುವುದಕ್ಕಾಗಿಯೇ ನಾನು ಅತ್ಯವಸ್ಥ ಸ್ಥಿತಿಯಲ್ಲಿ ಇಲ್ಲಿಗೆ ಬಂದಿದ್ದೇನೆ, ವಾಕ್ಪತೀ!"

"ಹೇಳುವಂತಹರಾಗಬೇಕು, ರುದ್ರಭಾನುಗಳೇ!"

"ರಾಜನ್, ಗೋದಾವರೀ ನದಿ ಕರ್ನಾಟಕ ಮತ್ತು ಮಾಳವದ ಮಧ್ಯದ ಮೇರೆಯಾಗಿದೆ. ಅದನ್ನು ದಾಟಿ ಚಲುಕ್ಯ ತೈಲಪನ ಮೇಲೆ ಏರಾಟ ಮಾಡುವುದು ಯುಕ್ತವಲ್ಲ."

"ಏಕಲ್ಲ, ಮಂತ್ರಿಗಳೇ? ಹೀಗೆ ಮಾಡಿದರೆ ಕ್ಷಿಪ್ರದಲ್ಲಿ ಶತ್ರು ನಮ್ಮ ವಶಕ್ಕೆ ಬರುವನು. ಕರ್ನಾಟಕದ ದಂಡು ನಮ್ಮ ತೆಂಕಣ ಗಡಿಯಲ್ಲಿ ಭದ್ರತೆಯಿಂದ ಬೀಡು ಬಿಟ್ಟು ಕುಳಿತಿರುವಾಗ ಹೀಗೆಯೇ ಅನಿಶ್ಚಿತ ಸ್ಥಿತಿಯಲ್ಲಿ ನಾವು ಇನ್ನೂ ಎಷ್ಟು ದಿನ ಸುಮ್ಮನಿರಬೇಕು?"

"ಮಹಾರಾಜ! ತಾವು ಗೋದಾವರಿಯ ಆಚೆಗೆ ನುಗ್ಗಿದರೆ ತಮಗೆ ಜಯವು ಖಂಡಿತವೆಂಬುದು ಹೇಗೆ?"

"ರುದ್ರಭಾನುಗಳೇ! ಹಿಂದೆ ನಾವು ಕರ್ನಾಟಕರನ್ನು ಎಷ್ಟು ಬಾರಿ ಸೋಲಿಸಿಲ್ಲ?"

"ಕೆಲವು ಸಲ ಸೋಲಿಸಿದ್ದೇವೆ. ಆದರೆ, ರಾಜನ್! ದೈವವು ಸದಾ ಏಕರೀತಿಯಾಗಿರುವುದಿಲ್ಲ. ಮೇಲಾಗಿ ಈ ಚಲುಕ್ಯ ತೈಲಪನು ಮಹಾ ರಾಜ್ಯತಂತ್ರ ಕುಶಲನು; ಸದಾ ಜಾಗರೂಕ."

"ಮಂತ್ರಿಗಳೇ! ಪೌರುಷಶಾಲಿಗಳು ದೈವವನ್ನು ನಂಬಿ ಸುಮ್ಮನೇ ಕೂಡಲು ಇಷ್ಟಪಡುವುದಿಲ್ಲ."

"ಸುಮ್ಮನೆ ಕೂಡಬೇಕೆಂದು ನಾನು ಹೇಳುವುದಿಲ್ಲ, ವಾಕ್ಪತೀ! ಈ ಸಂದರ್ಭದಲ್ಲಿ ನನಗೊಂದು ಭವಿಷ್ಯವು ನೆನಪಿಗೆ ಬರುತ್ತಿದೆ."

"ಅದೇನು, ರುದ್ರಭಾನುಗಳೇ?"

"ಮಹಾರಾಜ! ಹಿಂದೆ ನನ್ನ ತಾತನಿಗೆ ಒಬ್ಬ ಜ್ಯೋತಿಷಿ ಸಿಕ್ಕಿದ್ದನಂತೆ. ಮಾಳವದ ರಾಜರ ವಿಷಯದಲ್ಲಿ ಆತನು ಒಂದು ಭವಿಷ್ಯವನ್ನು ನುಡಿದನಂತೆ."

"ಅದು ಹೇಗೆ, ಮಂತ್ರಿಗಳೇ?"

"ರಾಜನ್! ಅದು ಭಯಪ್ರದವಾಗಿದೆ."

"ಮಂತ್ರಿಗಳೇ! ಹೇಳಲಿಕ್ಕೂ ಭಯವೇ?"

"ಹೇಳುತ್ತೇನೆ, ಮಹಾರಾಜ! ಆ ಜ್ಯೋತಿಷಿ ಹೀಗೆ ನುಡಿದನಂತೆ. 'ಈ ಮಾಳವದ ರಾಜರಲ್ಲಿ ಒಬ್ಬನಿಗೆ ದಕ್ಷಿಣದ ನರಪತಿಯಿಂದ ಭಯವಿದೆ. ಮಾನಹಾನಿಯ ಜೊತೆಗೆ ಪ್ರಾಣಹಾನಿಯೂ ಸಂಭವಿಸೀತು. ಈ ಅನರ್ಥವನ್ನು ತಪ್ಪಿಸಲು ಮಾಳವದ ಅರಸರು ಗೋದಾವರಿಯನ್ನು ದಾಟದಿರಲಿ.'"

"ಮಂತ್ರಿಗಳೇ, ಇದೇನು ಮಹಾ! 'ಪಂಚ ಭವತಿ, ಪಂಚ ನ ಭವತಿ.' ಹತ್ತರಲ್ಲಿ ಐದು ಸುಳ್ಳು, ಐದು ನಿಜ. ಇಂತಹ ಭವಿಷ್ಯಗಳು ಸುಳ್ಳಾಗುವುದೇ ಹೆಚ್ಚು. ಇದು ಜ್ಯೋತಿಷಿಗಳ ಆತ್ಮಪ್ರೌಢಿ. ಅಜ್ಞಜನರ ಮೇಲೆ ತಮ್ಮ ಪ್ರಭಾವ ಬೀರುವ ಗತ್ತು. ಹಿಂದೆ ನಾವು ಗೋದಾವರಿಯನ್ನು ದಾಟಿಲ್ಲವೇ? ದಕ್ಷಿಣದಲ್ಲಿ ದಂಡಯಾತ್ರೆ ಮಾಡಿಲ್ಲವೇ? ಜಯಶಾಲಿ

ಗಳಾಗಿಲ್ಲವೇ? ತಂದೆ ಸೀಯಕ ಮಹಾರಾಜರು ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟವನ್ನು ಸೂರೆಮಾಡಿದ ವಿಷಯ ತಮಗೆ ತಿಳಿಯದೇ?"

"ತಿಳಿಯುವುದು, ವಾಕ್ಪತೀ! ಆದರೆ ಹೊತ್ತು ಹೇಳಿ ಕೇಳಿ ಬರುವುದಿಲ್ಲ. ತಮ್ಮ ದಂಡಯಾತ್ರೆಯ ಸಮಾಚಾರವನ್ನು ಕೇಳಿದಾಗಿನಿಂದ ಏಕೋ ನನಗೆ ಭಯಾನಕವಾಗಿ ತೋರುತ್ತದೆ. ಭವಿಷ್ಯವಾದಿ ನುಡಿದ ಆ ಅನರ್ಥದ ಚಿತ್ರವು ಮತ್ತೆ ಮತ್ತೆ ನನ್ನ ಕಣ್ಣ ಮುಂದೆ ಬಂದು ನಿಲ್ಲುತ್ತದೆ."

"ರುದ್ರಭಾನುಗಳೇ! ತಮ್ಮ ಮೈಯಲ್ಲಿ ಚೆನ್ನಾಗಿಲ್ಲ. ಅದಕ್ಕಾಗಿ ಹೀಗೆ ಸುಮ್ಮನೆ ಹೆದರಿಕೆ ಅನಿಸುವುದು ಸ್ವಾಭಾವಿಕ." ಚಿತ್ರಾಂಗದನು ನಡುವೆ ಬಾಯಿ ಹಾಕಿದನು.

"ಚಿತ್ರಾಂಗದರು ಹೇಳಿದ ಮಾತು ನಿಜವೆಂದು ನನಗೂ ಅನಿಸುತ್ತದೆ." ಮುಂಜರಾಜನು ಪುಷ್ಟೀಕರಿಸಿದನು.

ರುದ್ರಭಾನು ಸಂತಪ್ತನಾಗಿ ನುಡಿದನು: "ವಾಕ್ಪತೀ! ಚಿತ್ರಾಂಗದರೇ! ಇದು ವಿನೋದದ ಸಮಯವಲ್ಲ. ತಲತಲಾಂತರಗಳಿಂದ ನನ್ನ ಮನೆತನವು ಮಾಳವ ಸಿಂಹಾಸನದ ಸೇವೆಯನ್ನು ಮಾಡುತ್ತ ಬಂದಿದೆ. ಈ ಸಿಹಾಂಸನದ ಮಾನಕ್ಕಾಗಿ, ಇದರ ಕ್ಷೇಮಕ್ಕಾಗಿ, ಅಪ್ರಿಯವೆನಿಸಿದರೂ ಪಥ್ಯಕರವಾದ ಮಾತುಗಳನ್ನು ಹೇಳುವುದು ನನ್ನ ಕರ್ತವ್ಯವಾಗಿದೆ."

ಸ್ವಲ್ಪ ಹೊತ್ತು ಸುಮ್ಮನಿದ್ದು ಉಸಿರಾಡಿಸಿಕೊಂಡು ರುದ್ರಭಾನು ಮಾತನ್ನು ಮುಂದುವರಿಸಿದನು:

"ವಾಕ್ಪತೀ! ತಮ್ಮ ಹೃದಯವು ಶಾರದಾದೇವಿಯ ಕ್ರೀಡಾರಂಗವಾಗಿದೆ. ತಾವು ತಮ್ಮ ವಿದ್ವತ್ವದಿಂದ, ವಿದ್ವತ್‌ಪಕ್ಷಪಾತದಿಂದ, ಶೌರ್ಯದಿಂದ, ಪರಾಕ್ರಮದಿಂದ, ಮಾಳವಜನಾಂಗದಲ್ಲಿ ಒಂದು ಹೊಸ ಮನ್ವಂತರವನ್ನು ನಿರ್ಮಾಣಮಾಡಿದ್ದೀರಿ. ತಮ್ಮ ಯಶೋದುಂದುಭಿ ದೇಶವಿದೇಶಗಳಲ್ಲಿ ಮೊಳಗುತ್ತಲಿದೆ. ಆದರೆ ತಮ್ಮ ಚಿತ್ತದಲ್ಲಿ ಇನ್ನೂ ಸ್ಥೈರ್ಯಕ್ಕೆ ಎಡೆದೊರೆತಿಲ್ಲ; ಸಾಹಸಬುದ್ಧಿ ಕುಗ್ಗಿಲ್ಲ; ಗಾಂಭೀರ್ಯವು ನೆಲೆಸಿಲ್ಲ; ವಿಲಾಸವು ಅಳಿದಿಲ್ಲ; ಪಾತ್ರಾಪಾತ್ರ ವಿವೇಕವು ಬೆಳೆದಿಲ್ಲ.

“ ವಾಕ್ಪತೀ ! ಆ ಜ್ಯೋತಿಷಿಯ ಭವಿಷ್ಯವಾಣಿ ಸ್ಮರಣೆಗೆ ಬಂದಾಗಲೆಲ್ಲ ನನ್ನ ಮೈ ಝಲ್ಲೆನ್ನುತ್ತದೆ; ಎದೆ ನಡುಗುತ್ತದೆ. ಅಂತಹ ಅಗೌರವವು, ಅಂತಹ ಕಲಂಕವು, ಅಂತಹ ಅನರ್ಥವು ಈ ಸಿಂಹಾಸನಕ್ಕೆ ಒದಗದಿರಲಿ ಎಂದು ಅಹರ್ನಿಶ ಶ್ರೀಮಹಾಕಾಲಸ್ವಾಮಿಯನ್ನು ಪ್ರಾರ್ಥಿಸುತ್ತೇನೆ. ನನ್ನ ಜೀವನದ ಗಳಿಗೆಬಟ್ಟಲು ತುಂಬುತ್ತಲಿದೆ. ಈ ಅಂತ್ಯ ಕಾಲದಲ್ಲಿ ನನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ನಾನು ತಮಗೆ ಪ್ರಾರ್ಥಿಸುತ್ತೇನೆ. ವಾಕ್ಪತೀ! ಸಾಹಸ ಮಾಡದಿರು. ಗೋದಾವರಿಯನ್ನು ದಾಟಬೇಡ, ಗೋದಾವರಿಯನ್ನು ದಾಟಬೇಡ. ಗೋದಾವರಿ ಕರ್ನಾಟಕದ ಗಡಿ. ಗೋ–ದಾ–ವ–ರಿ–ಯ–ನ್ನು ದಾಟ–ಬೇಡ—. ”

ರುದ್ರಭಾನುವಿನ ಸ್ವರವು ಕ್ಷೀಣವಾಗುತ್ತ ಹೋಯಿತು. ಆತನು ಈ ಮಾತುಗಳನ್ನು ಮಂದವಾಗಿ ತುಟಿಯಲ್ಲಿ ಉಚ್ಚರಿಸುತ್ತ, ಭ್ರಮಿಷ್ಟನಂತೆ ಕಣ್ಣುಗಳನ್ನು ತಿರುಹುತ್ತ ಕೆಳಗೆ ಬಿದ್ದುಬಿಟ್ಟನು.

ಚಿತ್ರಾಂಗದನ ಕರೆಗೆ ಸೇವಕ ಸೇವಿಕೆಯರು ಓಡಿ ಬಂದರು. ಎಲ್ಲರು ರುದ್ರಭಾನುವಿಗೆ ಶೀತೋಪಚಾರ ಮಾಡಿದರು. ಮುಂಜರಾಜನು ಸ್ವತಃ ಗಾಳಿ ಹಾಕಿದನು. ರುದ್ರಭಾನುವಿಗೆ ಸ್ವಲ್ಪ ಸ್ಮೃತಿ ಬಂದಿತು. ಆತನನ್ನು ಪಲ್ಲಕ್ಕಿಯಲ್ಲಿ ಮಲಗಿಸಿ ಮನೆಗೆ ಕಳಿಸಿದರು.

ಮಧ್ಯರಾತ್ರಿಯಲ್ಲಿ ಮಂತ್ರಿಭವನದಿಂದ ಮುಂಜರಾಜನಲ್ಲಿಗೆ ವರ್ತಮಾನ ಬಂದಿತು. “ ಗೋದಾವರಿ ಕರ್ನಾಟಕದ ಗಡಿ; ಗೋದಾವರಿಯನ್ನು ದಾಟ ಬೇಡ ” ಎಂದು ಅರ್ಧ ಸ್ಮೃತಿಯಲ್ಲಿ ಕನವರಿಸುತ್ತ ರುದ್ರಭಾನುವಿನ ಪ್ರಾಣಪಕ್ಷಿ ದೇಹಪಂಜರವನ್ನು ಬಿಟ್ಟು ಹಾರಿಹೋಯಿತಂತೆ !

[ ೫ ]

ಮಹಾವರಾಹ ಮಹಾವರಾಹ ।
ವಿಷ್ಣುಮೂರ್ತಿ ಹೇ ಮಹಾವರಾಹ ॥
ಕಡಲನು ಕದಡಿದ ಮುಮ್ಮುಡಿ ವೀರ ।
ಪೊಡವಿಯ ಹಲ್ಲಲಿ ನೆಗಹಿದ ಧೀರ ॥

ದುಷ್ಟರ ದಹಿಸುವ ಅತುಲ ಪ್ರತಾಪ ।
ಶಿಷ್ಟರ ಪಲಹುವ ನಂಮ ಕುಲದೀಪ ॥
ಖಲದರಿನಿಷೂದನ ॥
ಚಲುಕ್ಯ ವಿಮೋಚನ ॥
ತ್ರಾಹಿ ಮಾಂ ।
ಸಂವರ್ಧಯ ಮಾಂ ॥
ಮಹಾವರಾಹ, ಮಹಾವರಾಹ ॥

ಪ್ರಭಾತ ಸಮಯದಲ್ಲಿ ಅಂತಃಕರಣದ ಆಳದಲ್ಲಿ ಉದಯಿಸಿ ಸದ್ಗದಿತ ಕಂಠದಿಂದ ಹೊರಕ್ಕೆ ಬಂದುದು ಈ ಸ್ತೋತ್ರ. ಇದರ ರೀತಿ ಇದನ್ನು ಪಠಿಸುವ ವ್ಯಕ್ತಿಯ ಭಕ್ತಿಯ ಉತ್ಕಟತೆಯನ್ನು ಸೂಚಿಸುತ್ತಿತ್ತು. ಈ ಭಕ್ತನೋ ಹಿಂದೆ ನಮಗೆ ಪರಿಚಿತನಾದ ಮಹಾವೀರ. ತನ್ನ ಶಿಬಿರದಲ್ಲಿ ಮಹಾ ವರಾಹನ ವಿಗ್ರಹದ ಮುಂದೆ ಮೊಳಕಾಲೂರಿ ಕೈಜೋಡಿಸಿ ತಲೆಯನ್ನು ಬಗ್ಗಿಸಿ ವಂದನೆಗಳನ್ನು ಸಲ್ಲಿಸುತ್ತಿದ್ದಾನೆ. ಅನಂತರ ಆತನ ಮುಖದಿಂದ ಈ ನುಡಿಗಳು ಬಂದುವು :

"ಮಹಾವರಾಹ, ನಮ್ಮ ಚಲುಕ್ಯ ಕುಲದ ಅಧಿದೈವತ ನೀನು. ನಿನ್ನ ವರಪ್ರಸಾದ ಬಲದಿಂದ ನಾಲ್ಕು ಶತಮಾನಗಳ ಹಿಂದೆ ನಮ್ಮ ಪೂರ್ವಜ ಪುಲಕೇಶಿ ಮಹಾರಾಜ್ಯವನ್ನು ಸಂಸ್ಥಾಪಿಸಿ ಕರ್ನಾಟಕವನ್ನು ಉದ್ಧರಿಸಿದನು. ಈ ಮಹಾರಾಜ್ಯವು ಎರಡು ಶತಮಾನ ಬಾಳಿ ಅಸ್ತಂಗತವಾಯಿತು. ನಮ್ಮ ಕುಲದ ಕೀರ್ತಿ ಲುಪ್ತವಾಯಿತು. ಈ ವಿಪನ್ನ ಸ್ಥಿತಿಯಿಂದ ಚಲುಕ್ಯ ಮನೆ ತನವನ್ನು ಮೇಲಕ್ಕೆತ್ತಿ ಪುನಃ ಪ್ರಸಿದ್ಧಿಗೆ ತರುವ, ಭಾಗ್ಯವನ್ನು, ಮಹಾ ವರಾಹ! ನೀನು ನನಗೆ ದಯಪಾಲಿಸಿದೆ. ಚಲುಕ್ಯರ ಈ ಕರ್ನಾಟಕ ಸಾಮ್ರಾಜ್ಯದ ಪ್ರಬಲ ಪ್ರತಿಸ್ಪರ್ಧಿಗಳಾದ ಮಾಳವರನ್ನು ನಿರ್ಮೂಲನ ಮಾಡುವುದು ಇಂದಿನ ನನ್ನ ಕಾರ್ಯಭಾರವಾಗಿದೆ. ಇದನ್ನು ನಿರ್ವಹಿಸುವ ಶಕ್ತಿ ಪರಾಕ್ರಮಗಳನ್ನು ನೀನು ನನಗೆ ಕರುಣಿಸು, ಮಹಾವರಾಹ!"

ವಿನಮ್ರವಾದ ಮಹಾವೀರನ ಮಸ್ತಕವು ಮೇಲಕ್ಕೆ ಏಳುವಷ್ಟರಲ್ಲಿ ಅಲ್ಲಿ ಏನೋ ಒಂದು ಹಗುರಾದ ಪದಾರ್ಥವು ಬಂದು ಕೂತಂತೆ ಭಾಸ ವಾಯಿತು. ಅದನ್ನು ತೆಗೆದು ನೋಡಿದರೆ ಅದೊಂದು ಸುಂದರ ತಾವ

ಮಹಾವೀರನು ಈ ತಾವರೆ ಹೂವನ್ನು ತಲೆಯ ಮೇಲೆ ಧರಿಸಿ ಕಣ್ಣುಗಳಿಗೆ ಒತ್ತಿಕೊಂಡನು. ಆತನ ಕಣ್ಣಿನಿಂದ ಒಂದು ಹನಿ ಕೆಳಗೆ ಉದುರಿ ದಂತಾಯಿತು.

ಮಹಾವೀರನು ಶಿಬಿರದ ಬಾಗಿಲಿಗೆ ಬಂದನು. ಆಗ ಇನ್ನೂ ನಸುಕು. ಕತ್ತಲೆ ಅಳಿದು ಮುಂಜಾವದ ಬೆಳಕು ಸಾಕಷ್ಟು ಹರಿದಿರಲಿಲ್ಲ. ಬಾಗಿಲ ಬಳಿ ನಿಂತಿದ್ದ ವ್ಯಕ್ತಿಯನ್ನು ನೋಡಿ ಮಹಾವೀರನು ನುಡಿದನು :

" ಯಾರು ? ಸುಗುಪ್ತ ! ಎಲ್ಲ ಸಿದ್ಧತೆಯೂ ಸರಿಯಾಗಿದೆಯಲ್ಲವೇ ? ನಾವು ಎಣಿಸಿದುದಕ್ಕಿಂತ ಒಂದು ದಿನ ಮುಂಚಿತವಾಗಿಯೇ ಮುಂಜರಾಜನು ಹೊಳೆಯನ್ನು ದಾಟಿ ನಮ್ಮ ಮೇಲೆ ಏರಿ ಬಂದನಲ್ಲವೇ ? "

" ಅಹುದು, ಪರಮಭಟ್ಟಾರಕ ! ನಾಳಿನ ಬೆಳಗಿನಲ್ಲಿ ಬರಬೇಕಾಗಿದ್ದ ಆತನ ದಾಳಿ ಇಂದೇ ಬಂದು ಬಿಟ್ಟಿತು. ಚಿತ್ರಾಂಗದನಿಂದ ಮತ್ತು ಕಲಚುರಿ ಯುವರಾಜನಿಂದ ಗುಪ್ತಚಾರರು ತಂದ ವರ್ತಮಾನವು ನಾಳಿನ ಲೆಕ್ಕಕ್ಕೆ ಸರಿಯಾಗುತ್ತದೆ. ಆದರೆ ಆಕಸ್ಮಿಕ ಆಕ್ರಮಣದ ವೇಗದಿಂದ ನಾವು ಬೇಗ ಹಣ್ಣಿಗೆ ಬರುವೆವೆಂದು ಮುಂಜರಾಜನು ಎಣಿಸಿದಂತೆ ತೋರುತ್ತದೆ. ಈ ಉದ್ದೇಶದಿಂದ ಆತನು ದಂಡಿನ ಪಯಣವನ್ನು ಇನ್ನಷ್ಟು ತ್ವರೆಗೊಳಿಸಿರ ಬೇಕು. " ಸುಗುಪ್ತನು ವಿವರಿಸಿದನು.

" ಸುಗುಪ್ತಾ ! ಈ ಆಕಸ್ಮಿಕ ಏರಾಟದಿಂದ ನಮ್ಮ ದಂಡಿನವರಿಗೆ ಹಾನಿಯಿಲ್ಲವಷ್ಟೇ ? "

" ಸರ್ವತಃ ಇಲ್ಲ, ಪರಮಭಟ್ಟಾರಕ ! ನಾವಾದರೂ ಜಾಗ್ರತೆಯಿಂದ ಸಿದ್ಧತೆಯಲ್ಲಿಯೇ ಇದ್ದೆವು. ಹಡಗುಗಳಿಂದ ಇಳಿದ ಮಾಳವರ ಮುಂಬಡೆ ಯನ್ನು ನಮ್ಮ ಸೈನಿಕರು ಕೂಡಲೆ ತಡೆಗಟ್ಟಿರುವರು. ಇದೀಗ ಮುಂಜ ರಾಜನ ನೌಕೆ ಕೆಳಭಾಗದಲ್ಲಿ ಹೊಳೆಯ ಪ್ರವಾಹವನ್ನು ದಾಟಿ ಈಚೆಯ ದಡಕ್ಕೆ ಬಂದು ಸೇರಿದೆ ಎಂಬ ಸಮಾಚಾರ ಬಂದಿದೆ. "

" ಇಷ್ಟು ಆವೇಶದಿಂದ ಏರಿ ಬಂದ ಮುಂಜರಾಜನು ಸಾಹಸಾತಿಶಯ ವನ್ನು ತೋರುವನೆಂಬಲ್ಲಿ ಸಂದೇಹವಿಲ್ಲ. ಅದಕ್ಕಾಗಿ ನಾವು ಅತಿ ದಕ್ಷತೆ

ಯಿಂದ ಕಾದಬೇಕಾಗಿದೆ. ನಮ್ಮ ಸಹಾಯಕ ದಳಗಳೆಲ್ಲ ಪೂರ್ತಿಯಾಗಿ ಬಂದಿವೆಯಲ್ಲವೇ, ಸುಗುಪ್ತಾ ?"

"ಪರಮಭಟ್ಟಾರಕ! ಕಲಚುರಿ ಯುವರಾಜನ ಪಥಕಗಳು ನಿನ್ನೆ ಮಧ್ಯರಾತ್ರಿಯ ವರೆಗೆ ಈಚೆಗೆ ಬಂದು ಬಿಟ್ಟಿವೆ. ಸಾಮಂತ ಯಾದವ ಭಿಲ್ಲಮನ ಕೆಚ್ಚೆದೆಯ ಕಲಿಗಳು ಬಂದು ಮೂರು ದಿನವಾಗಿದೆ. ಈ ಸಂಗತಿ ತಮಗೆ ತಿಳಿದುದು."

"ಸುಗುಪ್ತಾ! ಸಂಗ್ರಾಮದಲ್ಲಿ ನಾವು ಅನುಸರಿಸಲಿರುವ ಯುದ್ಧ ನೀತಿಯ ರೂಪರೇಷೆಯನ್ನು ನಿನ್ನೆಯ ದಿನ ನಾನು ನಿನಗೆ ವಿವರಿಸಿದ್ದೇನೆ. ಆ ಮೇರೆಗೆ ನಾವು ನಮ್ಮ ಸೇನಾವ್ಯೂಹವನ್ನು ರಚಿಸಿ ಅದರ ಚಲನವಲನ ಗಳನ್ನು ನಿರ್ಧರಿಸಿಕೊಳ್ಳಬೇಕು."

"ಆ ವಿಷಯವು ಪೂರ್ತಿಯಾಗಿ ನನ್ನ ಮನದರಿಕೆಯಲ್ಲಿದೆ. ಈಗಾಗಲೆ ನಮ್ಮ ವ್ಯೂಹರಚನೆಯೂ ಆಗಿದೆ. ಆದರೆ, ಪರಮಭಟ್ಟಾರಕ! ನನ್ನದೊಂದು ಪ್ರಾರ್ಥನೆ. ತಾವು ಪ್ರತ್ಯಕ್ಷವಾಗಿ ಈ ಯುದ್ಧದಲ್ಲಿ ಭಾಗವಹಿಸದೆ ಸದಾ ಸಿದ್ಧತೆಯಲ್ಲಿರುವುದು ಲೇಸು. ಮುಂಜರಾಜನ ಮುಖ್ಯ ಇದಿರಾಳಿ ನಾನು. ತಾವು ನನ್ನ ಬೆಂಗಾವಲಿಗೆ ಇರತಕ್ಕದ್ದು. ಆದರೆ ಇದರ ಸುಳಿವು ಕೂಡ ಮುಂಜರಾಜನಿಗೆ ಹತ್ತದಿರಬೇಕು."

"ಹಾಗೆಯೇ ಆಗಲಿ, ಸುಗುಪ್ತಾ. ಜಯ ಮಹಾವರಾಹ!" ಎಂದು ಪರಮಭಟ್ಟಾರಕನು ತನ್ನ ಸೊಂಟಕ್ಕೆ ನೇತಾಡುತ್ತಿದ್ದ ಕತ್ತಿಯನ್ನು ಒರೆ ಯಿಂದ ಮೇಲಕ್ಕೆ ಸೆಳೆದು ಸಟ್ ಎಂದು ಮತ್ತೆ ಕೆಳಗೆ ಅದುಮಿದನು.

"ಜಯ ಮಹಾವರಾಹ! ಜಯ ಪರಮಭಟ್ಟಾರಕ!" ಎನ್ನುತ್ತ ಸುಗುಪ್ತನಾದರೂ ಅದೇ ವಿಧದಲ್ಲಿ ಕತ್ತಿಯನ್ನು ಕುಣಿಸಿ ವೇಗದಿಂದ ಹೊರಟು ಹೋದನು.

[ ೬ ]

ದಿವಾಕರನು ಉದಯಿಸಿ ಇನ್ನೂ ಎರಡು ಗಳಿಗೆಯಾಗಿಲ್ಲ. ಇಷ್ಟರಲ್ಲಿ ಗೋದಾವರಿಯ ವಿಸ್ತಾರವಾದ ಆ ದಕ್ಷಿಣ ತೀರ ಪ್ರದೇಶದಲ್ಲಿ ಘೋರವಾದ

ಕದನ ಕೋಲಾಹಲವು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿತು. ಖಟ್ ಖಟಲ್ ಎಂಬ ಖಡ್ಗಗಳ ತಾಕಲಾಟ, ಟೊಂಯ್ ಸೊಂಯ್ ಎಂಬ ಧನುರ್ಬಾಣಗಳ ಸುಳಿದಾಟ, ಸುರ್ ಫುರ್ ಎಂಬ ಈಟಿ ಭಲ್ಲೆಗಳ ತಿವಿದಾಟ; ಇವು ರಭಸ ದಿಂದ ಮುಂದುವರಿದುವು. ಈ ಧ್ವನಿಗಳನ್ನು ಅಡಗಿಸುವಂತಹ "ಹರಹರ ಮಹಾಕಾಲ" ಎಂಬ ಯೋಧರ ಘೋಷಣೆಗಳು, "ಜಯ ಮಹಾವರಾಹ" ಎಂಬ ವೀರರ ಗರ್ಜನೆಗಳು, "ಜಯ ವಾಕ್ಪತೀ ಮಾಳವ ಮಹಾರಾಜ" ಎಂಬ ಚೀತ್ಕಾರಗಳು, "ಜಯ ರಣರಂಗ ಭೀಮ ಪರಮಭಟ್ಟಾರಕ" ಎಂಬ ಜಯಜಯಕಾರಗಳು ಆಗಾಗ ಹೊರಹೊಮ್ಮಿ ದಿಕ್ಕುಗಳಲ್ಲಿ ಗುಡು ಗಾಡಿದುವು. ಇದಲ್ಲದೆ, ಈ ಹೊತ್ತಿಗೆ ಹೊಳೆಯನ್ನು ದಾಟಿ ಬಂದಿದ್ದ ಮಾಳವ ಪಡೆಯಲ್ಲಿಯ ಆನೆ ಕುದುರೆಗಳು ಕರ್ನಾಟಕದ ಆನೆ ಕುದುರೆ ಗಳೊಡನೆ ಮಲ್ಲಾಮಲ್ಲಿಯನ್ನು ಆರಂಭಿಸಿದುದರಿಂದ ನೆಲದಿಂದ ನೆಗೆದ ಹುಡಿಯ ಮೋಡಗಳು ಬಾನಬಯಲನ್ನು ಮುಸುಕ ತೊಡಗಿದ್ದುವು.

ಮಾಳವ ಪಡೆಯ ಮುಂಭಾಗದಲ್ಲಿ ಮಾಳವಾಧಿರಾಜ ಮುಂಜರಾಜನು ತೇಜಃಪುಂಜನಾಗಿ ಪ್ರಕಾಶಿಸುತ್ತಿದ್ದನು. ಆತನ ಇಂದಿನ ಆವೇಶವು ಅಪ್ರತಿಮವಾಗಿದ್ದಿತು. ಕರ್ನಾಟಕಾಧಿಪತಿ ತೈಲಪ ನರೇಂದ್ರನನ್ನು ಇಂದಿನ ಸಮರಕೇಳಿಯಲ್ಲಿ ಸೆರೆಹಿಡಿದೇ ತೀರಬೇಕೆಂದು ಆತನು ಭೀಷ್ಮಪ್ರತಿಜ್ಞೆ ಮಾಡಿದಂತೆ ತೋರಿತು.

ಕರ್ನಾಟಕ ಪಕ್ಷದ ರಣಾಂಗಣದ ಹಿಂಬದಿಗೆ ಬಹು ದೂರದಲ್ಲಿ ಸುಂದರ ವಾದ ಒಂದು ಶಿಬಿರವು ಶೋಭಿಸುತ್ತಿದ್ದಿತು. ಅದರ ಮೇಲುಗಡೆ ಉನ್ನತ ವಾದ ಮಹಾವರಾಹ ಧ್ವಜವು ನಲಿದಾಡುತ್ತಿದ್ದಿತು. ಇದುವೇ ತೈಲಪ ರಾಜನು ತಳವೂರಿದ ಮುಖ್ಯಸ್ಥಳವಾಗಿರಬೇಕೆಂದು ಮುಂಜರಾಜನು ಗ್ರಹಿಸಿದನು. ಆ ದಿಕ್ಕಿನಲ್ಲಿ ಪ್ರಚಂಡವಾದ ಆಕ್ರಮಣವನ್ನು ಆರಂಭಿಸಿದನು.

ಕರ್ನಾಟಕದ ಪರವಾಗಿ ಸಾಮಂತ ಯಾದವ ಭಿಲ್ಲಮ ಮತ್ತು ಸುಗುಪ್ತ ಇವರಿಬ್ಬರು ಮುಂಜರಾಜನ ಏರಾಟವನ್ನು ಇದಿರಿಸಿದರು. ಅವರು ಮುಂಜರಾಜನ ಆರ್ಭಟೆಯನ್ನು ಸ್ವಲ್ಪ ಹೊತ್ತು ತಡೆದು ನಿಲ್ಲಿಸಿ ಹೋರಾಡು ವರು. ಬಳಿಕ ಸೋಲನ್ನು ನಟಿಸುತ್ತ ಹಿಂದೆಗೆಯುವರು. ಮುಂಜರಾಜನು

ಇಮ್ಮಡಿಸಿದ ಹುಮ್ಮಸ್ಸಿನಿಂದ ಅವರ ಮೇಲೆ ನುಗ್ಗುವನು. ಈ ಕ್ರಮವು ಬಹುಕಾಲ ಮುಂದುವರಿಯಿತು. ತಮ್ಮ ಮಹಾರಾಜನ ಈ ಪರಾಕ್ರಮವನ್ನು ಕಂಡು ಆನಂದಿತರಾದ ಮಾಳವ ದಂಡಿನವರು ಈ ಯುದ್ಧದಲ್ಲಿ ಖಂಡಿತವಾಗಿ ತಮಗೇ ಜಯವು ದೊರೆಯುವುದೆಂದು ನೆರೆನಂಬಿದರು.

ಈ ಸಮರ ಕೇಂದ್ರವಲ್ಲದೆ ಬೇರೆ ಕಡೆಗೂ ಸಾಮಂತರೂ, ಸೇನಾನಾಯಕರೂ, ಸಹಾಯಕ ದಳದವರೂ ಕಾದಾಟಗಳನ್ನು ನಡೆಯಿಸಿದ್ದರು. ಆದರೆ ಅವುಗಳ ಸೋಲು ಗೆಲುವು ನಿರ್ಣಾಯಕವಾಗಿರಲಿಲ್ಲ. ಸಮರ ಕೇಂದ್ರದಿಂದ ಸ್ವಲ್ಪ ದೂರದ ಒಂದು ಭಾಗದಲ್ಲಿ ಮಹಾಮಂತ್ರಿ ಚಿತ್ರಾಂಗದನು ಒಂದು ಪಡೆಯ ಧುರೀಣತ್ವವನ್ನು ವಹಿಸಿ ಹೋರಾಡಲಣಿಯಾಗಿದ್ದನು. ಆದರೆ ಆತನಲ್ಲಿ ರಣೋತ್ಸಾಹವು ಸಾಕಷ್ಟು ಪ್ರಕಟವಾಗುತ್ತಿರಲಿಲ್ಲ.

ದಿನರಾಜನು ಈಗ ಪಡುವಣ ದೆಸೆಗೆ ಹೊರಳಿ ವಿಶ್ರಾಂತಿಗೆಂದು ಸಂಧ್ಯಾಮನೋಹರಿಯ ಶೃಂಗಾರಭವನವನ್ನು ಸಮೀಪಿಸುತ್ತಲಿರುವನು. ಆದರೆ ಮುಂಜರಾಜನ ಉದ್ದೇಶವು ಮಾತ್ರ ಸಫಲವಾಗುವ ಲಕ್ಷಣಗಳು ಇನ್ನೂ ತೋರಲಿಲ್ಲ. ಮುಂಜರಾಜನ ದೇಹದಲ್ಲಿ ಈಗೀಗ ದಣಿವಿನ ಚಿಹ್ನೆಗಳು ಕಾಣಿಸಿಕೊಂಡುವು. ಈ ನಡುವೆ ಒಂದೆರಡು ಸಲ ಬಳಲಿಕೆಯಿಂದ ಕೈ ಸೋತಾಗ ಅಳವಿಗೆ ಬಂದ ಆತನನ್ನು ಭಿಲ್ಲಮ ಸುಗುಪ್ತರು ಹೊಡೆದು ಕೆಡಹಬಹುದಾಗಿದ್ದಿತು. ಆದರೆ ಅದೇಕೋ ಅವರು ಹಾಗೆ ಮಾಡಲಿಲ್ಲ!

ನೇಸರನು ಮುಳುಗಲು ಎರಡು ಗಳಿಗೆಯಷ್ಟು ಅವಕಾಶ ಇದ್ದಿರಬಹುದು. ಈ ಹೊತ್ತಿಗೆ ಮುಂಜರಾಜನು ತೈಲಪನ ಆ ಶಿಬಿರದ ಹತ್ತಿರಕ್ಕೆ ಬಂದಿದ್ದನು. ಆದರೆ ಇಷ್ಟೊತ್ತಿಗೆ ಆತನ ಸೈನ್ಯದ ಬಹುಭಾಗವು ಹತವಾಗಿ ಆತನು ಕರ್ನಾಟಕ ದಂಡಿನವರಿಂದ ಸುತ್ತುಗಟ್ಟಲ್ಪಟ್ಟಿದ್ದನು. ಹೀಗೆ ತನ್ನ ಬೆಂಬಲವು ಕಡಿಮೆಯಾಗಿ ತಾನು ಶತ್ರುಗಳ ಮುತ್ತಿಗೆಯ ಪಂಜರದಲ್ಲಿ ಸಿಕ್ಕು ಬಿದ್ದಿರುವ ದುರ್ದೆಸೆ ಇದೀಗ ಮುಂಜರಾಜನ ಲಕ್ಷ್ಯಕ್ಕೆ ಬಂದಿತು. ಆದರೂ ಆತನು ಹತಾಶನಾಗಲಿಲ್ಲ.

ಮುಂಜರಾಜನು ಇದ್ದಕ್ಕಿದ್ದಹಾಗೆ ಸುಗುಪ್ತನ ಮೇಲೆ ನುಗ್ಗಿದನು. ಸುಗುಪ್ತನ ಧೈರ್ಯ ಪರಾಕ್ರಮಗಳು ಮುಂಜರಾಜನ ಹೃದಯವನ್ನು

ಆಕರ್ಷಿಸಿದ್ದುವು. ಆತನು ತನಗೆ ತಕ್ಕ ಇದಿರಾಳಿ ಎಂದು ಮುಂಜರಾಜನು ಕಂಡುಹಿಡಿದಿದ್ದನು. ಸುಗುಪ್ತನಾದರೂ ಜಾಗ್ರತೆಯಾಗಿ ಮುಂಜರಾಜನ ಏರಾಟವನ್ನು ಇದಿರಿಸಲು ಅಣಿಯಾದನು.

ಆ ವೀರರಿಬ್ಬರ ನಡುವೆ ತುಮುಲ ಯುದ್ಧವಾಯಿತು. ಈ ಕಾದಾಟವು ನಡೆದಿರುವಾಗ ಕರ್ನಾಟಕದವರ ಆಘಾತಗಳಿಂದ ಮುಂಜರಾಜನ ಪರಿವಾರ ಬಲವು ಕುಗ್ಗುತ್ತಲೇ ಇದ್ದಿತು. ಸುಗುಪ್ತನು ಆವೇಶಗೊಂಡು ತನ್ನ ಅಮೋಘ ಖಡ್ಗವನ್ನು ಮುಂಜನ ಮೇಲೆ ಬಲವಾಗಿ ಬೀಸಿದನು. ಮುಂಜನು ಅದನ್ನು ತನ್ನ ಗುರಾಣಿಯ ಮೇಲೆ ತೂಗಿ ಹಿಡಿದನು. ಈ ಪ್ರತಿಘಾತದಿಂದ ಸುಗುಪ್ತನ ಕತ್ತಿ ಕೈಯಿಂದ ಜಾರಿ ಕೆಳಗೆ ಬಿದ್ದಿತು. ಸಂಧಿಯನ್ನು ಸಾಧಿಸಿ ಮುಂಜನು ಸುಗುಪ್ತನ ಮೇಲೆ ಖಡ್ಗಪ್ರಹಾರ ಮಾಡಿದನು. ಸುಗುಪ್ತನು ಅದನ್ನು ತಪ್ಪಿಸಿಕೊಳ್ಳುತ್ತಿರುವಾಗ ಆತನ ಹಣೆಗೆ ಗಾಯ ವಾಯಿತು. ಆತನು ಮೂರ್ಛಿತನಾಗಿ ಕೆಳಗೆ ಬಿದ್ದನು.

ಬಿದ್ದ ವೈರಿಯ ಮೇಲೆ ಇನ್ನೊಂದು ಏಟನ್ನು ಕೊಡಲು ಮುಂಜನು ಕತ್ತಿಯನ್ನು ಎತ್ತಿದನು. ಅಷ್ಟರಲ್ಲಿ ಹಿಂಬದಿಯಿಂದ ಯಾರೋ ಬಂದು ಆತನ ಬಲಗೈಯನ್ನು ಗಟ್ಟಿಯಾಗಿ ಹಿಡಿದರು. ಅದೇ ಸಮಯದಲ್ಲಿ ಆತನ ಎಡಗೈ ಕಾಲುಗಳು ಮತ್ತು ದೇಹವೆಲ್ಲವೂ ಬಲವಾದ ಬಂಧನಕ್ಕೆ ಗುರಿ ಯಾದುವು. ಆತನ ಬಲಗೈಯನ್ನು ತಡೆಗಟ್ಟಿದ ವೀರನು ಅಧಿಕಾರವಾಣಿ ಯಿಂದ ಆಜ್ಞಾಪಿಸಿದನು: "ಮುಂಜರಾಜನನ್ನು ಭದ್ರವಾದ ಬಂಧನದಲ್ಲಿ ಇರಿಸಿರಿ. ಸುಗುಪ್ತನನ್ನು ನನ್ನ ಶಿಬಿರಕ್ಕೆ ಎತ್ತಿ ತನ್ನಿರಿ." ಹೀಗೆ ಆಜ್ಞಾಪಿಸಿ ಆ ವೀರನು ತತ್‌ಕ್ಷಣ ಅಲ್ಲಿಂದ ಹೊರಟು ಹೋದನು.

ಮುಂಜರಾಜನ ಬಂಧನದಿಂದ ಯುದ್ಧವು ಪರಿಸಮಾಪ್ತವಾಯಿತು.

ಮುಂಜರಾಜನು ಈ ಗತಿಯನ್ನು ಹೊಂದುತ್ತಿರುವಾಗ ಅತ್ತ ಚಿತ್ರಾಂಗನಾದರೂ ಕರ್ನಾಟಕದವರಿಗೆ ಕೈಸೆರೆಯಾದನು. ಆತನನ್ನು ಬಂಧಿಸಿ ದವರು, ಮಾರನಾಯಕ ಮತ್ತು ಸಿಂಗನಾಯಕ ಇವರು.

"ರಾಜಾಧಿರಾಜ ರಾಜಪರಮೇಶ್ವರ ಪರಮಭಟ್ಟಾರಕ ಆಹವಮಲ್ಲ ರಣರಂಗಭೀಮ ತೈಲಪ ಚಕ್ರೇಶ್ವರರಿಗೆ ಜಯ್ಯ, ಜಯ!!" ಎಂದು ಕರ್ನಾ

ಟಕದ ಶಿಬಿರದಲ್ಲಿ ಎಲ್ಲೆಲ್ಲಿಯೂ ಜಯಜಯಕಾರಗಳೂ ವಿಜಯ ಗರ್ಜನೆಗಳೂ ಮೊರೆವಿದ್ದುವು. ವಿಜಯ ದುಂದುಭಿಗಳು ಮೊಳಗಿದುವು.

[ ೭ ]

ಹೊತ್ತು ಮುಳುಗಿದೆ. ಸೋತವರು, ಗೆದ್ದವರು ಎಲ್ಲರೂ ನಿಶಾ ಸಮ್ರಾಜ್ಞಿಯ ಸ್ವಾಮಿತ್ವವನ್ನು ಒಪ್ಪಿಕೊಳ್ಳುತ್ತಲಿದ್ದಾರೆ. ಶಿಬಿರದಲ್ಲಿ ಮಹಾವರಾಹ ವಿಗ್ರಹದ ಮುಂದಿನ ಮಂಚದ ಮೇಲೆ ಸುಗುಪ್ತನು ಮಲಗಿದ್ದಾನೆ. ಆತನ ಪೆಟ್ಟು ಅಷ್ಟು ದೊಡ್ಡದಾಗಿರಲಿಲ್ಲ. ಒಂದು ಭಾಗ ಏಟಿನ ನೋವು, ಮತ್ತೊಂದು ಭಾಗ ಹೋರಾಟದ ದಣಿವು; ಇವುಗಳಿಂದಾಗಿ ಆತನು ಸ್ವಲ್ಪ ಹೊತ್ತು ನಿಶ್ಚೇಷ್ಟನಾಗಿ ಬಿದ್ದುಕೊಂಡಿದ್ದನು. ತಕ್ಕ ಉಪಚಾರಗಳಿಂದ ಇದೀಗ ಆತನಿಗೆ ಸ್ಮೃತಿ ಬರುತ್ತಲಿದೆ.

ಪರಮಭಟ್ಟಾರಕನು ಎವೆಯಿಕ್ಕದ ನಟ್ಟನೋಟದಿಂದ ಆತನ ಮುಖವನ್ನು ಲಕ್ಷಿಸುತ್ತಿದ್ದಾನೆ. ಸುಗುಪ್ತನಿಗೆ ಸ್ಮೃತಿ ಬರತೊಡಗಿದಂತೆ ಪರಮಭಟ್ಟಾರಕನ ಮುಖದ ಮೇಳೆ ಸಂತೋಷದ ಹೊಂಬೆಳಕು ಹಬ್ಬುತ್ತಿದೆ.

"ನಾನೆಲ್ಲಿದ್ದೇನೆ?" ಸುಗುಪ್ತನು ಎಚ್ಚತ್ತು ಕಣ್ದೆರೆದು ಕೇಳಿದನು.

"ನನ್ನ ಶಿಬಿರದಲ್ಲಿ." ಪರಮಭಟ್ಟಾರಕನು ಮೆದುವಾಗಿ ನುಡಿದನು.

"ಯುದ್ಧದ ಸಮಾಚಾರವೇನು?" ಸುಗುಪ್ತನು ಉತ್ಸುಕತೆಯಿಂದ ಪ್ರಶ್ನಿಸಿದನು.

"ಯುದ್ಧವು ಪರಿಸಮಾಪ್ತವಾಗಿದೆ, ಸತ್ಯಾಶ್ರಯ!" ಪರಮಭಟ್ಟಾರಕನು ಉತ್ತರಿಸಿದನು.

"ಯಾರು? ನಾನು ಸತ್ಯಾಶ್ರಯನಲ್ಲ, ಸುಗುಪ್ತ; ಪರಮಭಟ್ಟಾರಕರೇ!" ಸುಗುಪ್ತನು ಕಕ್ಕಾವಿಕ್ಕಿಯಾಗಿ ಬಿನ್ನವಿಸಿದನು.

"ಕುಮಾರ! ನೀನು ಈಗ ಸುಗುಪ್ತನಲ್ಲ, ಸತ್ಯಾಶ್ರಯನೇ. ನೀನು ಸುಗುಪ್ತನಾಗಿರಬೇಕಾದ ಕಾಲವೂ ಅಗತ್ಯವೂ ಮುಗಿದು ಹೋಯಿತು." ಪರಮಭಟ್ಟಾರಕನು ನಿರ್ಧಾರದ ವಾಣಿಯಿಂದ ತಿಳಿಸಿದನು.

" ಯುದ್ಧದಲ್ಲಿ ಏನಾಯಿತು ಪಿತಾಜೀ ? " ರಾಜಕುಮಾರ ಸತ್ಯಾಶ್ರಯನು ಸಮಾಧಾನಗೊಂಡು ತಂದೆ ತೈಲಪರಾಜನಿಗೆ ಕುತೂಹಲದಿಂದ ಕೇಳಿದನು.

" ನಮಗೆ ಜಯಶ್ರೀ. "

" ಮಾಳವರಿಗೆ ? "

" ಇತಿ ಶ್ರೀ. "

" ಮುಂಜರಾಜನು ಏನಾದನು ? "

" ನಮ್ಮ ಸೆರೆಯಾಳಾದನು. "

ಕುಮಾರ ಸತ್ಯಾಶ್ರಯನ ಮುಖವು ಉಲ್ಲಾಸದಿಂದ ಮಿನುಗಲಾರಂಭಿಸಿತು. ಆತನು ಎದ್ದು ಕುಳಿತನು. ತಂದೆ ಕೊಟ್ಟ ಹಿತಕರ ಪೇಯವನ್ನು ಕುಡಿದು, ಅಂದು ಬೆಳಗಿನಿಂದ ನಡೆದ ಯುದ್ಧದ ವರ್ತಮಾನಗಳನ್ನು ಒಂದೊಂದಾಗಿ ನೆನಪಿಗೆ ತಂದುಕೊಂಡನು. ತೈಲಪ ನರೇಂದ್ರನ ಶಿಬಿರವು ಅತ್ತ ದೂರದಲ್ಲಿದೆಯೆಂದು ಭ್ರಮಿಸಿ ಮುಂಜರಾಜನು ಕರ್ನಾಟಕ ಸೇನೆಯಲ್ಲಿ ನುಗ್ಗಿದುದರಿಂದ ಆತನು ತಮ್ಮ ವಶಕ್ಕೆ ಬರಲು ಸುಲಭವಾದುದು; ಒಂದೆರಡು ಸಲ ಆತನು ತಮ್ಮ ಕೈಗೆ ಸಿಕ್ಕಿದ್ದರೂ ಸೆರೆಹಿಡಿಯುವ ಉದ್ದೇಶದಿಂದ ಆತನನ್ನು ಕೊಲ್ಲದೆ ಬಿಟ್ಟುದು; ಚಿತ್ರಾಂಗದನ ಸ್ವಾಮಿದ್ರೋಹ; ಮುಂತಾದ ವಿಷಯಗಳನ್ನು ಆ ಪಿತಾಪುತ್ರರು ಮಾತಾಡಿಕೊಂಡರು.

ಅನಂತರ ತಾನು ಮೂರ್ಛೆ ಹೋದ ಬಳಿಕ ನಡೆದ ಸಂಗತಿಗಳನ್ನು ವಿವರಿಸಲು ಸತ್ಯಾಶ್ರಯನು ತೈಲಪನಿಗೆ ಕೇಳಿಕೊಂಡನು.

ತೈಲಪನು ನಗುತ್ತ ನುಡಿದನು: " ಮುಂದಿನ ಕಥೆಯೇನೂ ಅಷ್ಟು ದೊಡ್ಡದಾಗಿಲ್ಲ, ಸತ್ಯಾಶ್ರಯಾ! ಮುಂಜರಾಜನು ಬಿದ್ದಿರುವ ನಿನ್ನ ಮೇಲೆ ಕತ್ತಿಯನ್ನೆತ್ತಿದಾಗ ನಿನ್ನ ಬೆಂಗಾವಲಿಗಿದ್ದ ನಾನು ಆತನ ಕೈಯನ್ನು ಹಿಡಿದುಕೊಂಡೆನು. ಅದೇ ಕ್ಷಣದಲ್ಲಿ ಸಾಮಂತ ಭಿಲ್ಲಮ ಮೊದಲಾದವರು ಅಲ್ಲಿಗೇ ಓಡಿಬಂದು ಆತನನ್ನು ಪೂರ್ತಿಯಾಗಿ ಬಂಧಿಸಿದರು. "

" ಅಂತೂ ಈ ದಂಡಯಾತ್ರೆ ನಾವು ನಿರೀಕ್ಷಿಸಿದುದಕ್ಕಿಂತ ಮುಂಚಿತವಾಗಿ ಮತ್ತು ಹೆಚ್ಚು ಜಯಶೀಲವಾಗಿ ಕೊನೆಗಂಡಿತು, ಪಿತಾಜೀ ! "

" ಈ ವಿಜಯದ ಶ್ರೇಯಸ್ಸಿನಲ್ಲಿ ಬಹುಭಾಗವು ನಿನ್ನದಾಗಿದೆ, ಸತ್ಯಾಶ್ರಯ! ನಮ್ಮ ಪೂರ್ವಜರ ಸತ್ಯಾಶ್ರಯ ಎಂಬ ಪವಿತ್ರ ಹೆಸರು, ನಿನಗೆ ಒಪ್ಪುವಂತೆ, ನಾನು ಕೊಟ್ಟ 'ಇರಿವ ಬೆಡಂಗ' ಎಂಬ ಬಿರುದಾದರೂ ನಿನಗೆ ಅನ್ವರ್ಥಕವಾಗಿದೆ. ಇಂದಿನ ಸಂಗ್ರಾಮದಲ್ಲಿ ನೀನು ಪ್ರಕಟಿಸಿದ ಪರಾಕ್ರಮವು ಈ ಬಿರುದು ನಿನಗೆ ಇನ್ನಷ್ಟು ಅನುರೂಪವಾಗುವಂತೆ ಮಾಡಿದೆ, ಕುಮಾರ!"

" ಅದಿರಲಿ, ಪಿತಾಜೀ; ನಾಳಿನ ನಮ್ಮ ಕಾರ್ಯದ ರೂಪರೇಷೆ ಹೇಗೆ?"

" ಕುಮಾರ, ಈಗಲೇ ಅದರ ಯೋಚನೆ ನಿನಗೇಕೆ? ನಿನ್ನ ನೋವು ಆರಲಿ; ನಿನಗೆ ಆರೋಗ್ಯ ಉಂಟಾಗಲಿ."

" ನನಗೇನಾಗಿದೆ, ಪಿತಾಜೀ? ಅದೇನು, ಸುಮ್ಮನೆ ಉಗುರು ತಾಗಿದಂತೆ ಆಗಿದೆ. ಈಗಲೇ ಬೇಕಾದರೆ ಕಾಳಗಕ್ಕೆ ಹೊರಡುವೆ. ಅಷ್ಟು ಆರೋಗ್ಯವಾಗಿದ್ದೇನೆ, ಶಕ್ತಿಯುತನಾಗಿದ್ದೇನೆ."

" ಸಂತೋಷದ ಸಂಗತಿ, ಕುಮಾರ! ನಾವು ಇನ್ನು ಇಲ್ಲಿ ಹೆಚ್ಚು ಹೊತ್ತು ತಂಗುವಂತೆ ಇಲ್ಲ. ನಾಳಿನ ದಿನವೇ ನಮ್ಮ ರಾಜಧಾನಿಯ ಕಡೆಗೆ ಹೊರಡುವುದು ಯೋಗ್ಯವು. ಮುಂಜರಾಜನ ಬಂಧನದಿಂದ ಇನ್ನೂ ಕೆಲ ಕಾಲವಾದರೂ ಮಾಳವರು ತಲೆಯೆತ್ತಲಾರರು."

" ಮಾಳವ ಜನಾಂಗಕ್ಕೆ ಇದೊಂದು ದೊಡ್ಡ ಆಘಾತವೇ ಸರಿ. ಪರಾಜಯ ಮತ್ತು ಅಪಮಾನ, ಈ ದ್ವಿವಿಧ ಆಪತ್ತಿನಿಂದ ಅವರು ತಲೆತಗ್ಗಿಸಿಕೊಂಡು ಬಾಳಬೇಕಾಗಿದೆ."

" ಅದು ನಿಜ, ಸತ್ಯಾಶ್ರಯ! ಆದರೆ ಮಾಳವ ಸಿಂಹಾಸನದ ಉತ್ತರಾಧಿಕಾರಿಗಳು ಮುಂದೆ ಈ ಪರಾಭವದ ಸೇಡನ್ನು ತೀರಿಸಲು ಪ್ರಯತ್ನಿಸದೆ ಬಿಡರು. ಅದಕ್ಕಾಗಿ ನಾವು ನಮ್ಮ ಉತ್ತರದ ಗಡಿಗಳನ್ನು ಬಹು ದಕ್ಷತೆಯಿಂದ ಕಾಯಬೇಕಾಗಿದೆ. ಈ ಕೆಲಸವನ್ನು ಸಾಮಂತ ಯಾದವ ಭಿಲ್ಲಮನಿಗೆ ಒಪ್ಪಿಸುವುದಾಗಿ ನಾನು ಯೋಚಿಸಿದ್ದೇನೆ. ಮುಂಜರಾಜನನ್ನು ಮಾತ್ರ ಅತಿ ಭದ್ರವಾದ ಕಾವಲಲ್ಲಿ ನೋಡಿಕೊಳ್ಳುವ ಹೊಣೆ ನಿನ್ನದಾಗಿದೆ."

“ಪಿತಾಜೀ ! ಮುಂಜರಾಜನ ಜೊತೆಗೆ ಚಿತ್ರಾಂಗದನಾದರೂ ಸೆರೆಯಲ್ಲಿ ಉಳಿಯಬೇಕಾದುದು. ಕ್ಷುಪ್ರ ಸ್ವಭಾವದ ಸುಖಲೋಲುಪರು ತಮ್ಮ ಅಲ್ಪ ಹಿತಕ್ಕಾಗಿ ಎಂತಹ ಹೀನ ಕೆಲಸವನ್ನೂ ಮಾಡಲಿಕ್ಕೆ ಹೇಸರು.”

“ಮಾಳವದ ಶೂರ ಸೈನಿಕರಲ್ಲಿ ಅನೇಕರು ಸಂಗ್ರಾಮದಲ್ಲಿ ಹತರಾಗಿದ್ದಾರೆ. ಮಿಕ್ಕವರು ತಮ್ಮ ರಾಜನ ಬಂಧನದಿಂದ ದಿಕ್ಕುಗೆಟ್ಟು ಪಲಾಯನ ಸೂಕ್ತವನ್ನು ಪಠಿಸುತ್ತಿದ್ದಾರೆ. ಇಂತಹರ ತಕ್ಕ ಸಮಾಚಾರವನ್ನು ತೆಗೆದುಕೊಳ್ಳಲು ಕಲಚುರಿ ದಂಡಿನವರು ಸಮರ್ಥರಾಗಿದ್ದಾರೆ. ನೀನು ವಿಶ್ರಮಿಸಿಕೊಳ್ಳುವ ಸಮಯವು ಇನ್ನೂ ಆಗಿಲ್ಲವೇ, ಸತ್ಯಾಶ್ರಯ ?”

ತಂದೆಯ ಈ ಸೂಚನೆಯನ್ನನುಸರಿಸಿ ಸತ್ಯಾಶ್ರಯನು ಎದ್ದನು. ಸೇವಕನ ಸಹಾಯದಿಂದ ತನ್ನ ಶಿಬಿರಕ್ಕೆ ನಡೆತಂದು ಗಾಢನಿದ್ರೆಯಲ್ಲಿ ನಿರತನಾದನು.

ಮರುದಿನ ಬೆಳಗಾಗುವಷ್ಟರಲ್ಲಿ ಸುಗುಪ್ತನಾದವನು ನಿಜವಾಗಿ ರಾಜಕುಮಾರ ಸತ್ಯಾಶ್ರಯನು, ಎಂಬ ಸಮಾಚಾರವು ಕರ್ನಾಟಕದ ಶಿಬಿರದಲ್ಲಿ ವಾಯುವೇಗದಿಂದ ಹರಡಿಕೊಂಡಿತು.

## [ ೮ ]

“ಮಾಳವೇಶ ವಾಕ್ಪತಿಗಳೇ ! ನಿನ್ನೆಯ ರಾತ್ರಿ ಹೆಚ್ಚು ಆಯಾಸವಿಲ್ಲದೆ ಕಳೆಯಿತಷ್ಟೇ ?”

ಮುಂಜರಾಜನು ಕ್ಷಣ ಹೊತ್ತು ಮೌನವಾಗಿದ್ದನು. ಆ ಮೇಲೆ ಒಂದು ನಿಟ್ಟುಸಿರನ್ನು ಬಿಟ್ಟು ನಡುಕದ ದನಿಯಲ್ಲಿ ನುಡಿದನು:

“ರಾಜನ್ ! ಹೀಗೆ ನನ್ನನ್ನು ಹೀಯಾಳಿಸುವುದು ಯುಕ್ತವಲ್ಲ. ಈಗ ನಾನು ಮಾಳವೇಶನಲ್ಲ, ವಾಕ್ಪತಿಯೂ ಅಲ್ಲ. ನಿನ್ನೆಯ ದಾರುಣ ಘಟನೆಯಿಂದ ನನ್ನ ವಾಕ್‌ಶಕ್ತಿಯೇ ಕುಂಠಿತವಾದಂತಿರುವಾಗ ನಾನು ವಾಕ್ಪತಿ ಹೇಗೆ ?”

ಮರುದಿನ ಬೆಳಗಿನಲ್ಲಿ ತೈಲಪನು ತನ್ನ ಶಿಬಿರದ ಇನ್ನೊಂದು ಭಾಗದಲ್ಲಿ ಮುಂಜರಾಜನನ್ನು ಕರೆಯಿಸಿದನು. ಆತನು ಬಂದು ಆಸನದ ಮೇಲೆ

ಕುಳಿತ ಬಳಿಕ ಮೇಲಿನಂತೆ ಪ್ರಶ್ನೆ ಮಾಡಿದನು. ಮುಂದೆ ಮುಂಜರಾಜನ ಮಾತಿಗೆ ಪ್ರತಿಯಾಗಿ ಹೀಗೆ ಹೇಳಿದನು :

“ ಕ್ಷಮಿಸಿ ಮುಂಜರಾಜರೇ! ಇಷ್ಟು ದಿನಗಳ ವರೆಗಿನ ಮಾಳವದ ಪ್ರಭುತ್ವದಿಂದ ನಿಮಗೆ ಬಂದ ಮಾಳವೇಶ ಎಂಬ ಅಂಕಿತವು ಒಂದು ಗಳಿಗೆಯಲ್ಲಿ ತೊಲಗಿ ಹೋಗುತ್ತದೆಯೇ ? ಪರಾಜಿತರಾದರೂ ನೀವು ಮಾಳವದ ದೊರೆಗಳೇ ಅಹುದು. ನಿಮ್ಮ ಪಾಂಡಿತ್ಯದ ಮೂಲಕ ನಿಮಗೆ ಪ್ರಾಪ್ತವಾಗಿರುವ ವಾಕ್ಪತಿ ಎಂಬ ನಿಮ್ಮ ಪದವಿಗಾದರೂ ಈ ಒಂದು ಆಗಂತುಕ ಕಾರಣದಿಂದ ಲೋಪ ಬರುವುದೆಂತು ? ಮಾಳವೇಶಾ ! ನಿಮ್ಮ ಭಾಗ್ಯಚಕ್ರವು ತಲೆಕೆಳಗಾಗಿದ್ದರೂ ನಾನು ನಿಮ್ಮೊಡನೆ ಗೌರವದಿಂದ ನಡೆದುಕೊಳ್ಳುವೆ ಒಂದೊಂದು ಸಂದರ್ಭದಲ್ಲಿ ಬರಬಹುದಾದ ಸೋಲು–ಗೆಲುವಿನಿಂದ ಮನುಷ್ಯನ ಯೋಗ್ಯತೆ ಹಾಳಾಗಿ ಹೋಗಲಾರದು. ”

“ ತೈಲಪರಾಜರೇ, ಮನ್ನಿಸಿರಿ. ನಿನ್ನೆಯ ವಿಪತ್ತಿಯಿಂದ ನನ್ನ ಶಕ್ತಿಗಳು ನಿಜವಾಗಿ ಸ್ತಿಮಿತವಾಗಿವೆ. ಹೀಗೆ ನನಗೆ ಸೋಲಾಗುವುದೆಂದು ನಾನು ಎಣಿಸಿರಲಿಲ್ಲ. ನಾನು ಮಾಡಿದ ಒಂದು ಘೋರ ತಪ್ಪಿಗಾಗಿ ಈಗ ನನಗೆ ಪಶ್ಚಾತ್ತಾಪವಾಗುತ್ತಲಿದೆ. ಆದರೆ ಪ್ರಯೋಜನವೇನು ? ಕೊನೆಗೆ ರುದ್ರಭಾನುಗಳು ಹೇಳಿದುದೇ ನಿಜವಾಯಿತು. ‘ ಗೋದಾವರಿಯನ್ನು ದಾಟಬೇಡ, ಗೋದಾವರಿ ಕರ್ನಾಟಕದ ಗಡಿ. ’ ಎಂದು ಮೃತ್ಯುಮುಖದಲ್ಲಿದ್ದ ಆ ಮುದುಕನು ಎಷ್ಟು ಪರಿಯಿಂದ ನನಗೆ ಹೇಳಿದನು ! ತೈಲಪರಾಜ, ನೀನು ಭಾಗ್ಯಶಾಲಿ. ನಿನಗೆ ದೈವವು ಅನುಕೂಲವಾಯಿತು. ”

“ ಮುಂಜರಾಜ, ಗತಂ ನ ಶೋಚ್ಯಂ. ನಿಮ್ಮ ಬಂಧನವು ಕರ್ನಾಟಕ–ಮಾಳವ ಜನಾಂಗಗಳಲ್ಲಿ ಶಾಂತಿ ನೆಲೆಗೊಳ್ಳಲು ಸಹಾಯಕವಾಗಲಿ ಎಂದು ಆಶಿಸುತ್ತೇನೆ. ನನ್ನಂತೆ ನೀವಾದರೂ ಜೀವನದ ಕಷ್ಟ ನಿಷ್ಠುರಗಳನ್ನು ಅನುಭವಿಸಿದ್ದೀರಿ. ಕಾರಾಗೃಹದ ಅಧಿಕಾರಿಗಳು ನಿಮ್ಮ ಗೌರವಕ್ಕೆ ತಕ್ಕಂತೆ ನಿಮ್ಮೊಡನೆ ನಡೆದುಕೊಳ್ಳುವರು. ನೀವು ಮಾತ್ರ ಹೆಚ್ಚಿನ ಹವ್ಯಾಸಕ್ಕೆ ಹೋಗದೆ ವಿದ್ಯಾವ್ಯಾಸಂಗದಲ್ಲಿ ಶಾಂತವಾಗಿ ಕಾಲವನ್ನು ಕಳೆದರೆ ಲೇಸು. ಜಾಣರಾದವರು ಹಿಂದಿನ ತಪ್ಪುಗಳಿಂದ ಹೆಚ್ಚಿನ ಪಾಠವನ್ನು ಕಲಿತು ಮುಂದೆ

ಪುನಃ ಪಶ್ಚಾತ್ತಾಪಪಡ ಸಂದರ್ಭಗಳು ಬರದಂತೆ ವರ್ತಿಸುವರು. ಸಾಮಾನ್ಯ ವಾಗಿ ನಮ್ಮ ಸಾಧು ಅಸಾಧು ಕೃತಿಗಳೇ ನಮ್ಮ ಸುಖ ದುಃಖಗಳಿಗೆ ಕಾರಣ ವಾಗುವುವು. ರಾಜಶಾಸನವು ಕಠೋರವಾದುದು!"

"ತೈಲಪರಾಜ, ಉಪದೇಶಿಸುವುದು ಸುಲಭ; ಆಚರಿಸುವುದು ಸುಲಭವಲ್ಲ. ಮಹಾರಾಜನಾಗಿ ಒಂದು ಜನಾಂಗದ ಕರ್ಣಧಾರನಾಗಿದ್ದ ನಾನು ಸೆರೆಯಾಳಾಗಿ ಸುಮ್ಮನೆ ಕಾಲ ಕಳೆಯುವುದು ಹೇಗೆ?"

"ಮುಂಜರಾಜ, ಇದಕ್ಕೆ ಸಮಾಧಾನ ಹೇಳುವವರು ಯಾರು? ನೀವು ಇದುವರೆಗೆ ಅನೇಕ ಯುದ್ಧಗಳನ್ನು ಜಯಿಸಿದ್ದೀರಿ. ಅನೇಕ ನಾಯಕ ರನ್ನೂ ನರಪತಿಗಳನ್ನೂ ನಿಮ್ಮ ಕಾರಾಗೃಹದಲ್ಲಿ ಇರಿಸಿದ್ದೀರಿ. ಹೀಗೆ ಮಾಡುವಾಗ ಅವರನ್ನು ಕುರಿತು ನೀವು ಈ ರೀತಿಯಲ್ಲಿ ಯೋಚಿಸಿದಿರಾ? ನನ್ನನ್ನೇ ನೀವು ಸೆರೆ ಹಿಡಿಯಬೇಕೆಂದು ಮಾಡಿರಲಿಲ್ಲವೇ? ಅನ್ಯರಿಗಾದ, ಆಗಬೇಕೆಂದಿದ್ದ ಅವಸ್ಥೆ ಈಗ ನಿಮಗೆ ಒದಗಿದೆ. ಇದಕ್ಕಾಗಿ ಚಿಂತಿಸಿ ಫಲವೇನು?"

"ಅದಿರಲಿ, ತೈಲಪರಾಜ! ಕಾರಾಗೃಹದಲ್ಲಿ ನನಗೆ ಯಾವ ಬಗೆಯ ಸೌಲಭ್ಯಗಳು ದೊರೆಯಬಹುದು?"

"ಸನ್ಮಾನ್ಯ ಜನನಾಯಕನಿಗೆ ಸಲ್ಲತಕ್ಕ ಆಹಾರ ವಿಹಾರಗಳು ನಿಮಗೆ ದೊರೆಯುವುವು. ನಿಮ್ಮ ವಿದ್ಯಾವ್ಯಾಸಂಗಕ್ಕೆ ತಕ್ಕ ಸೌಕರ್ಯಗಳನ್ನು ಒದಗಿಸಲಾಗುವುದು. ಆದರೆ, ಮುಂಜರಾಜ! ಈ ಮೂರು ನಿಯಮಗಳನ್ನು ಮಾತ್ರ ನೀವು ಬಹು ಜಾಗರೂಕತೆಯಿಂದ ಪಾಲಿಸತಕ್ಕದ್ದು."

"ಅವು ಯಾವುವು, ತೈಲಪರಾಜ?"

"ಒಂದನೆಯದು, ನೀವು ಬಂಧನ ಮಂದಿರದಿಂದ ಬಿಡುಗಡೆ ಹೊಂದಲು ಯಾವ ಬಗೆಯ ಪ್ರಯತ್ನವನ್ನಾದರೂ ಮಾಡಕೂಡದು. ಎರಡನೆಯದು, ಕ್ಷುದ್ರ ಜನರ ಸಹವಾಸವನ್ನು ಬಯಸಬಾರದು. ಮೂರನೆಯದು, ನಿಮ್ಮ ಯೋಗ್ಯತೆಗೆ ಒಪ್ಪದಂತಹ ವಿಷಯಗಳಲ್ಲಿ ಮನಸ್ಸನ್ನು ಹಾಕಬಾರದು. ಈ ನಿಯಮ ಪಾಲನೆಯಲ್ಲಿ ವ್ಯತ್ಯಾಸವು ಬಂದರೆ ಅದರ ಪರಿಣಾಮವು ಭಯಂಕರವಾದೀತು!"

“ತೈಲಪರಾಜ! ಬಂಧನದಲ್ಲಿದ್ದವನಿಗೆ ಇಲ್ಲದ ಗೊಡವೆಗೆ ಹೋಗಲು ಹೇಗೆ ತಾನೇ ಸಾಧ್ಯ? ನಿಮ್ಮ ಸೆರೆಯಾಳಾದ ಬಳಿಕ ನೀವು ಹಾಕಿಕೊಟ್ಟ ನಿಯಮಗಳನ್ನು ನಾನು ಪಾಲಿಸಲೇ ಬೇಕು. ಆದರೆ ಕಠೋರ ಏಕಾಂತವಾಸದಲ್ಲಿದ್ದರೆ ನನ್ನ ಬುದ್ಧಿಯಲ್ಲಿ ವಿಕಾರವುಂಟಾಗುವ ಸಂಭವವಿದೆ.”

“ಹಾಗೇನೂ ಆಗಲಾರದು, ಮುಂಜರಾಜ. ಆಗಾಗ ನಿಮ್ಮ ಜೊತೆಗೆ ಮಾತನಾಡಲು ಯೋಗ್ಯ ಜನರು ಬರುವರು.”

“ಇದಕ್ಕಾಗಿ ನಾನು ನಿಮಗೆ ಉಪಕೃತನಾಗಿದ್ದೇನೆ, ತೈಲಪರಾಜ! ಇನ್ನು ಹೋಗಲು ಅಪ್ಪಣೆಯಷ್ಟೇ? ಇಷ್ಟು ದಿನಗಳ ವರೆಗೆ ಕರ್ನಾಟಕದ ಘನವಾದ ಹೆಸರನ್ನು ಮಾತ್ರ ಕೇಳುತ್ತಿದ್ದೆನು. ಇನ್ನು ಮೇಲೆ ಪ್ರತ್ಯಕ್ಷವಾಗಿ ಕರ್ನಾಟಕವನ್ನು ಕಂಡು ಅರಿಯುವೆ.”

“ಮುಂಜರಾಜ, ಕರ್ನಾಟಕದ ಬಗೆಗೆ ಒಂದು ಮಾತನ್ನು ನೀವು ನೆನಪಿನಲ್ಲಿಡತಕ್ಕದ್ದು. ಕರ್ನಾಟಕರು ಮನಸ್ಸಿನಲ್ಲಿ ಒಂದು, ಮಾತಿನಲ್ಲಿ ಒಂದು, ಕೃತಿಯಲ್ಲಿ ಒಂದು. ನಂಬಿದರೆ ಅವರಂತಹ ಮಿತ್ರರಿಲ್ಲ. ನಂಬದಿದ್ದರೆ ಅವರಂತಹ ಶತ್ರುಗಳಿಲ್ಲ. ಕರ್ನಾಟಕರ ಯಥಾರ್ಥ ಸ್ವರೂಪವನ್ನು ತಿಳಿಯಲು ಸಹೃದಯತೆ ಬೇಕು.”

“ಅದು ನನ್ನಲ್ಲಿ ಇದ್ದೇ ಇದೆ.”

“ಸಂದೇಹವೇನು?”

“ವಂದನೆಗಳು.”

“ಪ್ರಣಾಮಗಳು.”

ಮುಂಜರಾಜನು ಕಾವಲುಭಟರ ಮಧ್ಯದಲ್ಲಿ ತನ್ನ ಸ್ಥಳಕ್ಕೆ ಹೊರಟು ಹೋದನು.

[ ೯ ]

ತೈಲಪನು ಗೋದಾವರೀ ತೀರದಿಂದ ತನ್ನ ರಾಜಧಾನಿಗೆ ಮರಳಿ ಕೆಲವು ದಿನಗಳಾಗಿವೆ. ಮಾಳವ ದಂಡಯಾತ್ರೆಯ ನಿಮಿತ್ತದಿಂದ ಹಿಂದುಳಿದಿದ್ದ ರಾಜಕೀಯ ಮತ್ತು ಆಡಳಿತದ ಅನೇಕಾನೇಕ ವಿಷಯಗಳತ್ತ ಲಕ್ಷ್ಯ

ವನ್ನು ಪೂರಯಿಸುವುದರಲ್ಲಿ ಆತನು ಮಗ್ನನಾಗಿದ್ದಾನೆ. ಹೀಗಿರಲು ಒಂದು ದಿನ ಮುಂಜಾವದಲ್ಲಿ ಇದ್ದಕ್ಕಿದ್ದ ಹಾಗೆ ಸತ್ಯಾಶ್ರಯನು ಆತನ ಬಳಿಗೆ ಬಂದುಬಿಟ್ಟನು. ಕುಮಾರನ ಈ ಆಕಸ್ಮಿಕ ಆಗಮನದಿಂದ ತೈಲಪನಿಗೆ ನಸು ಅಚ್ಚರಿಯೆನಿಸಿತು. ಆತನು ಸತ್ಯಾಶ್ರಯನಿಗೆ ಕೂಡಲು ಹೇಳಿ, ಆತನು ಬಂದ ಸಮಾಚಾರವನ್ನು ಆತುರದಿಂದ ವಿಚಾರಿಸತೊಡಗಿದನು.

"ಏಕೆ, ಸತ್ಯಾಶ್ರಯ! ಹೀಗೆ ಅಕಲ್ಪಿತವಾಗಿ ಬಂದು ಬಿಟ್ಟೆ! ನಿನ್ನ ರಾಜಬಂದಿ ಭದ್ರವಾಗಿರುವನಷ್ಟೇ?"

ಸತ್ಯಾಶ್ರಯನು ವಿಚಾರಮಗ್ನಸ್ಥಿತಿಯಲ್ಲಿ ಉತ್ತರಿಸಿದನು: "ಆ ಸಮಾಚಾರವನ್ನೇ ತಮಗೆ ವಿವರವಾಗಿ ಅರುಹಲು ನಾನು ಅವಸರದಿಂದ ಬಂದುಬಿಟ್ಟಿದ್ದೇನೆ, ಪಿತಾಜೀ!"

"ಏನು ವಿಶೇಷ? ಹೇಳು ಕುಮಾರ."

"ವಿಶೇಷವೆಂದರೆ ಹೀಗೆ. ಮುಂಜರಾಜನಿಗೆ ನಾವು ಬಂಧನಮಂದಿರದಲ್ಲಿ ಒದಗಿಸಿದ ಸೌಕರ್ಯಗಳು ನಮ್ಮ ಪಾಲಿಗೆ ಕಂಟಕರೂಪವಾಗುವಂತೆ ತೋರುತ್ತದೆ."

"ಅದು ಯಾವ ವಿಧದಿಂದ, ಕುಮಾರ?

"ಪಿತಾಜೀ! ಮುಂಜರಾಜನ ಬಂಧನದಿಂದ ಮಾಳವ ಪಕ್ಷದವರು ಸುಮ್ಮನೆ ಕುಳಿತಾರು, ಮಾಳವ-ಕರ್ನಾಟಕ ಜನಾಂಗಗಳಲ್ಲಿ ಶಾಂತಿ ಸ್ಥಾಪನೆ ಆದೀತು, ಎಂಬ ನಮ್ಮ ಎಣಿಕೆಗಳು ನಿರಾಧಾರವೆಂಬಂತೆ ತೋರುತ್ತವೆ. ಇದೀಗ ಮುಂಜರಾಜನ ಬಿಡುಗಡೆಗಾಗಿ ಒಂದು ದೊಡ್ಡ ಒಳಸಂಚು ನಡೆದಿದ್ದಂತೆ ನನಗೆ ಸಂದೇಹವು ಬರತೊಡಗಿದೆ."

"ಅದು ಹೇಗೆ ತಾನೇ ಸಾಧ್ಯ, ಸತ್ಯಾಶ್ರಯ? ನಮ್ಮ ಕಾವಲು ಭಟರು ಅನುಭವಿಕರೂ ಸದಾ ಜಾಗರೂಕರೂ ಆಗಿರುವಾಗ, ನಮ್ಮ ಗುಪ್ತಚಾರರು ವಿಶ್ವಾಸಿಕರೂ ಕಾರ್ಯದಕ್ಷರೂ ಆಗಿರುವಾಗ,—"

"ಅಹುದು, ಪಿತಾಜೀ! ಇಂತಹ ಗುಪ್ತಚಾರರ ಗುಪ್ತ ಸಮಾಚಾರಗಳೇ ನನ್ನ ಸಂದೇಹಕ್ಕೆ ಕಾರಣ."

" ಅದೆಂತಹ ಸಮಾಚಾರಗಳು, ಸತ್ಯಾಶ್ರಯ ? "

" ಇದೀಗ ಚಿತ್ರಾಂಗದನು ಮತ್ತೆ ಮುಂಜರಾಜನ ಆತ್ಮೀಯ ಮಂತ್ರಿಯಾಗಿದ್ದಾನೆ. "

" ಏನು, ಚಿತ್ರಾಂಗದನೇ ? "

" ಅಹುದು. ಗೋದಾವರೀ ಸಂಗ್ರಾಮದಲ್ಲಿ ಆತನು ನಮಗೆ ಮಾಡಿದ ಸಹಾಯಕ್ಕಾಗಿ ನಾವು ಆತನಿಗೆ ಒಂದು ಮಂಡಲಾಧಿಕಾರವನ್ನು ಕೊಡುವೆವೆಂದು ಆತನು ಆಶಿಸಿದ್ದನು. ಆ ಆಶೆ ನೆರವೇರದೆ ಅದಕ್ಕೆ ಪ್ರತಿಯಾಗಿ ಕಾರಾಗೃಹವು ತನ್ನ ಹಣೆಗೆ ಕಟ್ಟಿದುವನ್ನು ಕಂಡು ಆ ಧೂರ್ತ ಸ್ವಾರ್ಥಿಯು ಬಹಳ ನಿರಾಶೆಗೊಂಡಿರುವನು. ನಮ್ಮ ಮೇಲಿನ ರೊಚ್ಚಿನಿಂದ ಮುಂಜರಾಜನನ್ನು ಕೂಡಿಕೊಂಡು ಒಳಸಂಚನ್ನು ರಚಿಸಲಣಿಯಾಗಿರುವನು. "

" ಈ ಅವಕಾಶವು ಸೆರೆಮನೆಯಲ್ಲಿದ್ದ ಆತನಿಗೆ ಹೇಗೆ ದೊರೆತಿತು ? "

" ನಮ್ಮ ಔದಾರ್ಯದ ಫಲವಾಗಿ, ಪಿತಾಜೀ ! ನಾವು ಉದಾರ ಮನಸ್ಸಿನಿಂದ ಮುಂಜರಾಜನಿಗೆ ಸೌಲಭ್ಯಗಳನ್ನು ಒದಗಿಸಲು ಒಪ್ಪಿದೆವು. ಅದರ ದುರುಪಯೋಗವನ್ನು ಆತನು ಮಾಡಿಕೊಂಡನು. ಏಕಾಂತವಾಸದ ಬೇಸರವನ್ನು ಕಳೆಯಲು ಆತನು ಚಿತ್ರಾಂಗದನನ್ನು ದಿನಾಲು ಒಮ್ಮೆಯಾದರೂ ತನ್ನ ಬಳಿಗೆ ಕಳುಹಲು ಕೇಳಿದನು. ಕಾವ್ಯಾಲಾಪಕ್ಕಾಗಿ ಕವಿಗಳನ್ನು ಕರೆಯಿಸಿದನು. ವ್ಯಾಕರಣ, ನ್ಯಾಯ, ಜ್ಯೋತಿಷ, ಮೀಮಾಂಸಾ ಮುಂತಾದ ಶಾಸ್ತ್ರಪಾರಂಗತರನ್ನು ಬರಮಾಡಿಕೊಂಡನು. ನಾಟ್ಯ ಬಲ್ಲವರು, ಸಂಗೀತಗಾರರು, ನರ್ತಕಿಯರು, ಇವರೂ ಆತನಿಗೆ ಬೇಕಾದರು. ಹೀಗೆ ಯಾರು ಯಾರನ್ನೋ ನೆರೆಯಿಸಿಕೊಂಡು ಹಗಲು ರಾತ್ರಿಯೊಗೊಂದಲ ಹಾಕತೊಡಗಿದನು. ಅವರ ಹೊಟ್ಟೆಯಲ್ಲಿ ಹೊಕ್ಕು, ತನ್ನ ಮೇಲೆ ದಯೆ ಹುಟ್ಟುವಂತೆ ಮಾತನಾಡಿದನು. ಹೊರಗೆ ಸುದ್ದಿ ಸಮಾಚಾರಗಳನ್ನು ಕಳುಹಿದನು; ಹೊರಗಿನಿಂದ ತರಿಸಿಕೊಂಡನು. ಸೇವಕ ಸೇವಕಿಯರಿಗೆ ಪಾರಿತೋಷಕಗಳನ್ನು ಹಂಚಿದನು. ಸೇವಕಿಯರೆಂದರೆ ಆತನಿಗೆ ಹೆಚ್ಚು ಪ್ರೀತಿಪಾತ್ರರು. "

“ ಕುಮಾರ, ಇದನ್ನೆಲ್ಲ ನೀನೇಕೆ ಸಕಾಲದಲ್ಲಿ ಪ್ರತಿಬಂಧಿಸಲಿಲ್ಲ ? ”

“ ಹಾಗೆಯೇ ಮಾಡಿದ್ದೇನೆ, ಪಿತಾಜೀ! ಅದನ್ನೇ ನಿಮಗೆ ಪೂರ್ತಿಯಾಗಿ ಅರಿಕೆ ಮಾಡಲು ನಾನಿಲ್ಲಿಗೆ ಬಂದುದು. ನೀವು ಕೊಟ್ಟ ಸೌಕರ್ಯಗಳನ್ನು ನಾನು ಒಮ್ಮೆಲೆ ಕಸಿದುಕೊಳ್ಳುವುದು ತರವಲ್ಲವೆಂದು ನೆನೆದು ಕೆಲ ದಿನ ಸುಮ್ಮನಿದ್ದೆನು. ಮನುಷ್ಯನ ಸದ್ಗುಣವಾಗಲಿ, ದುರ್ಗುಣವಾಗಲಿ, ಸಾಕಷ್ಟು ಪ್ರಕಟವಾಗಲಿಕ್ಕೆ ಆತನಿಗೆ ತಕ್ಕ ಅವಕಾಶವನ್ನು ಕಲ್ಪಿಸಿಕೊಡಬೇಕು. ಅಂದರೆ ಆತನ ಯೋಗ್ಯತೆಯು ಪರೀಕ್ಷೆಯಾಗುತ್ತದೆ. ಮೇಲಾಗಿ ಮುಂಜರಾಜನ ಈ ತಂತ್ರಗಳು ಮುಂದುವರಿಯುತ್ತಿರುವಾಗ ನಮ್ಮ ಗುಪ್ತಚಾರರು ಅವುಗಳನ್ನೆಲ್ಲ ಸೂಕ್ಷ್ಮವಾಗಿ ಕಂಡುಕೊಳ್ಳುತ್ತಲೇ ಇದ್ದರು. ನಿನ್ನೆಯಿಂದಂತೂ ದಿನವೊಂದಕ್ಕೂ ಬೇರೆ ಸೇವಕರು ಮತ್ತು ಬೇರೆ ಕಾವಲುಗಾರರು ಆತನಿದ್ದ ಸ್ಥಳಕ್ಕೆ ನೇಮಕವಾಗುವಂತೆ ಆಜ್ಞಾಪಿಸಿದ್ದೇನೆ. ”

“ ಸರಿ, ಚೆನ್ನಾಯಿತು, ಕುಮಾರ. ಇದರ ಮೇಲಿಂದ ಆತನ ವರ್ತನೆ ನಾವು ಹಾಕಿಕೊಟ್ಟ ಮೂರು ನಿಯಮಗಳಿಗೂ ವಿರೋಧಿಯಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ನಿಯಮಭಂಗಕ್ಕಾಗಿ ಆತನು ಕಠೋರ ರಾಜಶಾಸನಕ್ಕೆ ಗುರಿಯಾಗಲರ್ಹನು. ”

“ ಅನುಮಾನವಿಲ್ಲ, ಪಿತಾಜೀ! ಆದರೆ ಬೇಟೆಯನ್ನು ಪೂರ್ತಿಯಾಗಿ ಬಲೆಯಲ್ಲಿ ಸಿಕ್ಕಿಸಿ ಆ ಮೇಲೆ ಅದನ್ನು ಹಣ್ಣಿಗೆ ತರುವುದು ಒಳ್ಳೆಯದು. ಮುಂಜರಾಜನ ಕೃಷ್ಣಕಾರಸ್ಥಾನಗಳು ಇನ್ನೂ ಹೆಚ್ಚಾಗಿ ಪಕ್ವದಸೆಗೆ ಬರುವುದನ್ನು ನಿರೀಕ್ಷಿಸುವ. ಹಾಗೆ ಮಾಡಿದರೆ ಆತನ ಅನುಚಿತ ಕೃತಿಗಳೂ ದುರ್ವ್ಯಾಪಾರಗಳೂ ಪ್ರಪಂಚಕ್ಕೆ ವಿದಿತವಾದಾವು. ಇಲ್ಲವಾದರೆ, ಸೆರೆಮನೆಯಲ್ಲಿರಿಸಿದ ವೈರಿಯ ಮೇಲೆ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿ ದಂಡಿಸಿದರು, ಎಂಬ ಲೋಕಾಪವಾದವು ನಮಗೆ ಬಂದೀತು. ”

“ ಈ ನಿನ್ನ ವಿಚಾರವು ಯೋಗ್ಯವಾಗಿದೆ. ಕುಮಾರ! ಈ ಸಂದರ್ಭದಲ್ಲಿ ಲತೆಯ ಸಹಾಯವನ್ನು ನಾವು ತೆಗೆದುಕೊಳ್ಳಬೇಕು. ಆಕೆ ಮುಂಜರಾಜನನ್ನು ಸಂಧಿಸಿರುವಳೇನು ? ”

“ ಒಮ್ಮೆ ಮಾತ್ರ, ಪಿತಾಜೀ! ಆದರೆ ಈ ಪ್ರಥಮ ದರ್ಶನದಲ್ಲಿ ಅವರಿಬ್ಬರಲ್ಲಿ ಪರಸ್ಪರ ಮೈತ್ರಿಯು ಉಂಟಾದಂತೆ ಕಾಣುತ್ತದೆ. ”

“ ಕುಮಾರ, ಈ ಮುಂದಿನ ಕಾರ್ಯಭಾರವನ್ನು ನಾವು ಆಕೆಯ ಮೇಲೆ ಒಪ್ಪಿಸಬಹುದು. ಇಂತಹ ವಿಷಯಗಳಲ್ಲಿ ಆಕೆ ಚತುರೆ. ”

“ ಹಾಗೆಯೇ ಮಾಡುವ, ಪಿತಾಜೀ! ಸ್ನೇಹಲತಾ ಅತ್ತೆಯವರ ಮುಂದೆ ತಾವು ಈ ವಿಷಯವನ್ನು ವಿವರವಾಗಿ ಪ್ರಸ್ತಾಪಿಸಬಹುದು. ”

“ ಅದನ್ನು ನಾನು ನೋಡಿಕೊಳ್ಳುವೆ, ಸತ್ಯಾಶ್ರಯ. ”

ಬಳಿಕ ಸತ್ಯಾಶ್ರಯನು ತಂದೆಯ ಅಪ್ಪಣೆಯನ್ನು ಕೇಳಿಕೊಂಡು ತನ್ನ ನಿವಾಸಕ್ಕೆ ಹೊರಟು ಹೋದನು.

## [ ೧೦ ]

“ ವಾಕ್ಪತಿ ರಾಜರಿಗೆ ನಮೋ ನಮಃ! ”

ಮೃದುಮಧುರವಾದ ಕೊರಲಿನಿಂದ ಬಂದ ಈ ಶಬ್ದಗಳನ್ನು ಕೇಳಿ ಮುಂಜರಾಜನು ಬಾಗಿಲತ್ತ ಹೊರಳಿ ನೋಡಿದನು. ಅಲ್ಲಿ ಮನೋಹರಿಯಾದ ಲಲನೆಯೊಬ್ಬಳು ಆತನ ದೃಷ್ಟಿಯನ್ನು ಸೆಳೆದುಕೊಂಡಳು. ಆಕೆಯ ರೂಪವು ಮೋಹಕವಾಗಿದ್ದಿತು. ಉಡುಪು ಚಿತ್ತಾಕರ್ಷಕವಾಗಿದ್ದಿತು. ಆಕೆ ತಾವರೆಯ ಮೊಗ್ಗಿನಂತೆ ಕೋಮಲವಾದ ತನ್ನ ಕರಗಳನ್ನು ನಯವಾಗಿ ಜೋಡಿಸಿದ್ದಳು. ಆಕೆಯ ಮುಖವು ಮಂದಹಾಸವನ್ನು ಬೀರುತ್ತಿದ್ದಿತು.

ಆ ವನಿತೆಯನ್ನು ನೋಡಿ ಮುಂಜರಾಜನ ನೇತ್ರಗಳು ವಿಕಸಿತವಾದುವು. ಆತನ ಅಂತಃಕರಣವು ಆನಂದಮಯವಾಯಿತು. ಆತನು ತನ್ನ ಆಸನದಿಂದ ಎದ್ದು ಆಕೆಯನ್ನು ಸ್ವಾಗತಿಸಿದನು.

“ ಬನ್ನಿ, ಸ್ನೇಹಲತಾದೇವಿಯವರೇ! ಅಮೃತಜಲವೃಷ್ಟಿಯಿಂದ ಮರುಭೂಮಿ ತೃಪ್ತಿಪಡೆಯುವಂತೆ ಈ ಕಾರಾಗೃಹದಲ್ಲಿ ಏಕಾಕಿಯಾಗಿ ಪರಿತಪಿಸುತ್ತಿದ್ದ ನನ್ನ ಹೃದಯವು ತಮ್ಮ ದರ್ಶನದಿಂದ ಹರ್ಷಗೊಂಡಿದೆ. ದೇವೀ, ಬಹುದಿನಗಳಾದುವು ತಾವು ಇಲ್ಲಿಗೆ ಬಂದು. ಚಾತಕಪಕ್ಷಿಯಂತೆ ನಾನು ತಮ್ಮ ಆಗಮನವನ್ನು ಇದಿರು ನೋಡುತ್ತಿದ್ದೇನೆ. ತಮ್ಮಾ ಪ್ರಥಮ

ಪರಿಚಯದ ಮಧುರ ಸ್ಮೃತಿಯನ್ನು ನಾನೆಂದಿಗೂ ಮರೆಯಲಾರೆನು. ಇನ್ನೊಮ್ಮೆ ಬೇಗ ಬರುವುದಾಗಿ ಮಾತು ಕೊಟ್ಟು ಅಂದು ತಾವು ಅವಸರದಿಂದ ಹೊರಟುಹೋದಿರಿ. ಇದುವರೆಗೆ ಬರಲೇ ಇಲ್ಲ! ದೇವೀ, ತಮ್ಮೊಂದಿಗೆ ಹೇಳಬೇಕಾಗಿದ್ದ ಸುಖಸಲ್ಲಾಪದ ವಿಷಯಗಳು ಹಲವಿವೆ."

ಸ್ನೇಹಲತೆ ಹತ್ತಿರಕ್ಕೆ ಬಂದು ಮುಂಜರಾಜನ ಪಕ್ಕದ ಒಂದು ಆಸನದಲ್ಲಿ ಕುಳಿತುಕೊಂಡಳು. ಆಕೆಯ ಕಣ್ಣುಗಳಲ್ಲಿ ಚಾಂಚಲ್ಯದ ಹೊಳಪು ಸುಳಿದಾಡುತ್ತಿದ್ದಿತು. ಆಕೆಯ ರೂಪಚಂದ್ರಮನು ಯೌವನದ ಮಧ್ಯಾಕಾಶದಿಂದ ಕೆಳಗಿಳಿದು ಕೆಲಕಾಲವಾಗಿದ್ದರೂ ಆತನ ಕಾಂತಿ ಇನ್ನೂ ಕಂದಿರಲಿಲ್ಲ. ನಸುಮಾಸಿದರೂ ಪುಟವಿಕ್ಕಿದ್ದ ಚಿನ್ನದಂತಿದ್ದ ಆಕೆಯ ಮೈಬಣ್ಣವು ತಳತಳನೆ ತೊಳಗುತ್ತಿದ್ದಿತು. ಆಕೆಯ ಮುಖ ಮುದ್ರೆ ರಸಿಕರನ್ನು ಮುಗ್ಧಗೊಳಿಸುವಂತಹ ಒಂದು ವಿಧದ ನಿಗೂಢ ಶಕ್ತಿಯಿಂದ ಕೂಡಿದ್ದಿತು. ಸ್ನೇಹಲತೆ ಮುಂಜರಾಜನೊಡನೆ ಮಾತುಕತೆಗಳನ್ನು ಆರಂಭಿಸಿದಳು.

"ವಾಕ್ಪತಿರಾಜರೇ! ನನ್ನನ್ನು ಕ್ಷಮಿಸಬಹುದಲ್ಲವೇ ತಾವು? ಅದೇನನ್ನು ಹೇಳಲಿ ತಮಗೆ? ತಮ್ಮಂತೆ ನನ್ನ ಹೃದಯವಾದರೂ ತಮ್ಮ ದರ್ಶನಕ್ಕಾಗಿ ಕಾತರವಾಗಿದೆ. ಅಂತೆಯೇ ಅನೇಕ ಅಡ್ಡಿ ಆತಂಕಗಳನ್ನು ನೀಗಿ ನಾನಿಂದು ತಮ್ಮಲ್ಲಿಗೆ ಬಂದು ಬಿಟ್ಟೆನು. ಅಂದು ಇಲ್ಲಿಂದ ಹೋದ ಬಳಿಕ ತಮ್ಮ ದರ್ಶನವನ್ನು ಪಡೆಯಲು ನಾನು ಎಷ್ಟು ವಿಧದಿಂದ ಪ್ರಯತ್ನಿಸಿದೆನೋ, ದೇವನೇ ಬಲ್ಲ. ತಮ್ಮಂತೆ ನನಗೂ ಬಂಧನಗಳಿವೆ!"

"ದೇವೀ! ತಮಗೆ ಯಾವ ಬಂಧನಗಳು? ತಾವು ತೈಲಪನ ಅರಮನೆಗೆ ಸೇರಿದವರೆಂದು ಹೇಳಲಿಲ್ಲವೇ ಅಂದು?" ಮುಂಜರಾಜನು ಚಕಿತನಾಗಿ ಕೇಳಿದನು.

"ಅಹುದು, ವಾಕ್ಪತಿರಾಜರೇ! ಅಂತೆಯೇ ನನ್ನ ಮೇಲೆ ಬಂಧನಗಳಿವೆ. ನಾನೊಬ್ಬ ಸಾಮಾನ್ಯ ಮಹಿಳೆ ಆಗಿದ್ದರೆ, ಹಾ! ಅದೆಷ್ಟು ಹಾಯಾಗಿ ಇರುತ್ತಿದ್ದೆನು!"

"ದೇವೀ! ತಾವು ತೈಲಪನಿಗೆ ದೂರದ ಸಂಬಂಧಿಕರೆಂದೂ, ವಾವೆಯಿಂದ ಆತನಿಗೆ ತಂಗಿಯಾಗಬೇಕೆಂದೂ ಹೇಳಲಿಲ್ಲವೇ? ತೈಲಪನು ಸಥಿ

ಯಿಂದ ನಿಮ್ಮನ್ನು 'ಲತೆ'ಯೆಂದು, ಸತ್ಯಾಶ್ರಯನು 'ಅತ್ತೆ'ಯೆಂದು ಕರೆಯು ವರೆಂಬುದಾಗಿಯೂ ನೀವು ಹೇಳಿದಂತೆ ನೆನಪು."

"ನಿಜ, ಮಹಾರಾಜ! ನಾನು ಹೇಳಿದುದು ಹಾಗೆಯೇ; ವಸ್ತು ಸ್ಥಿತಿಯೂ ಹಾಗೆಯೇ. ಆದರೆ ಅದರಿಂದ ಏನು ಪ್ರಯೋಜನ? ಆ ಪಿತಾಪುತ್ರರ ಕಾಕದೃಷ್ಟಿ ಯಾವಾಗಲೂ ನನ್ನ ಮೇಲೆ ನಟ್ಟಿರುತ್ತದೆ. ಅವರ ಅನುಮತಿ ಇಲ್ಲದೆ ನಾನು ಎಲ್ಲಿಗೂ ಹೋಗಕೂಡದಂತೆ."

"ಏಕೆ ಹೀಗೆ?"

"ಏಕೆಂದರೆ, ನಾನು ಕೆಟ್ಟವಳಂತೆ. ಯಾವಾಗ ಯಾರಿಗೆ ಏನು ಕೆಡು ಕನ್ನು ಮಾಡಿಯೇನು ಎಂಬುದನ್ನು ಹೇಳಲಿಕ್ಕಾಗುವುದಿಲ್ಲವಂತೆ."

"ಅಯ್ಯೋ ಪಾಪ! ಹೀಗೆಯೇ? ದೇವೀ, ನನಗೆ ತಮ್ಮ ಬಗೆಗೆ ಬಹಳ ಮರುಕವಾಗುತ್ತದೆ."

"ಅದೇನು ಹೇಳಲಿ, ವಾಕ್ಪತಿರಾಜ! ಇದೀಗ ಆ ಪಿತಾಪುತ್ರರಿಗೆ ದೊಡ್ಡ ಪದವಿ ಬಂದಿದೆ. ಮೊನ್ನೆ ಮೊನ್ನೆಯವರೆಗೆ ಅವರು ಪಟ್ಟ ಪಾಡು ನಾನೊಬ್ಬಳಿಗೆ ಮಾತ್ರ ಗೊತ್ತು. ನಾನು ಅವರನ್ನು ಎಂತೆಂತಹ ಸಂಕಟ ಗಳಿಂದ ಕಾಪಾಡಿದ್ದೇನೆ! ನಾನು ಅವರನ್ನು ಎಂತಹ ಘೋರ ಕುತ್ತುಗಳಿಂದ ಪಾರು ಮಾಡಿದ್ದೇನೆ! ಆಗ ಅವರಿಬ್ಬರೂ ಕೇವಲ ವಿಧೇಯರಾಗಿ ನನ್ನನ್ನು ಅನುಸರಿಸಿಕೊಂಡಿದ್ದರು. ಇದೀಗ ನಾನೆಂದರೆ ಅವರಿಗೆ ಕೆಟ್ಟವಳಾಗಿದ್ದೇನೆ."

"ದೇವೀ! ಇದು ನಿಜವಾಗಿ ಅನ್ಯಾಯ, ಮಹಾ ಅನ್ಯಾಯ!"

"ಅನ್ಯಾಯವೆಂದು ಬೇರೆ ಹೇಳಬೇಕೇ, ವಾಕ್ಪತಿರಾಜ! ನಾನೊಬ್ಬ ಅಭಾಗಿನಿ; ಬಾಲವಿಧವೆ. ಅನಾಥೆಯಾಗಿ ತೈಲಪನನ್ನು ನಂಬಿಕೊಂಡು ಆತನ ಪರಿವಾರದಲ್ಲಿ ಇದ್ದು ಬಿಟ್ಟಿದ್ದೇನೆ. ಆತನಿಂದ ನನಗೆ ಆದ ಸಹಾಯಕ್ಕಿಂತ ನಾನು ಆತನಿಗೆ ಮಾಡಿದ ಉಪಕಾರಗಳು ಅಧಿಕವಾಗಿವೆ. ಆದರೆ ಹೀಗಿದ್ದರೂ ಈಗೀಗ ಆ ಪಿತಾಪುತ್ರರು ಮಾಡುತ್ತಿರುವ ಅಕ್ರಮಗಳನ್ನು ಕೇಳಿದರೆ ತಾವು ಏನನ್ನುತ್ತೀರೋ!"

"ದೇವೀ ! ದುಃಖಿಸಬೇಡ. ತ್ರೈಲಪನ ಅನ್ಯಾಯದ ಬಾಧೆ ನನಗಾದರೂ ಅಸಹ್ಯವಾಗಿದೆ. ಈಗ ಕೆಲದಿನಗಳಿಂದ ಈ ಕಾರಾಗೃಹದಲ್ಲಿಯ ನನ್ನ ವಾಸವು ನರಕವಾಸವಾಗಿದೆ."

"ಅದು ಹೇಗೆ, ವಾಕ್ಪತಿರಾಜ ! ಅವರು ತಮಗೆ ಬೇಕಾದ ಸೌಕರ್ಯಗಳನ್ನು ಕೊಟ್ಟಿರುವುದಿಲ್ಲವೇ ?

"ಇಲ್ಲ, ಒಂದೂ ಇಲ್ಲ, ದೇವೀ ! ಅದೆಲ್ಲ ಈಗ ಹಳೆಯ ಮಾತಾಯಿತು. ನನ್ನ ರಾಜಧಾನಿಯಲ್ಲಿಯಂತೆ ಹಿಂದೆ ಇಲ್ಲಿ, ಈ ಸೆರೆಮನೆಯಲ್ಲಿ, ಪ್ರತಿನಿತ್ಯವೂ ನನ್ನ ಓಲಗವು ನಡೆಯುತ್ತಿದ್ದಿತು. ನನ್ನ ಸಂದರ್ಶನಕ್ಕೆ ಬರುವವರು ಎಷ್ಟು ಜನರು ! ಕಾವ್ಯಶಾಸ್ತ್ರ ವಿನೋದ ಚರ್ಚೆಗಳಲ್ಲಿ ಭಾಗಿಗಳಾಗುವವರು ಎಷ್ಟು ಜನರು ! ಆದರೆ ಈಗ ಒಂದು ಬೆಕ್ಕಿನ ಪಿಳ್ಳೆಯೂ ಇಲ್ಲಿಗೆ ಬರುವುದಿಲ್ಲ. ಎಲ್ಲವೂ ನಿಂತು ಹೋಗಿದೆ."

"ಚಿತ್ರಾಂಗದರು ?"

"ಅವನೂ ಇಲ್ಲ, ದೇವೀ ! ಅವನಿದ್ದರೆ ಎಷ್ಟು ಹಗುರಾಗುತ್ತಿತ್ತು !"

"ಚಿತ್ರಾಂಗದರು ಬಹು ರಸಿಕರು. ಅವರಿದ್ದಿದ್ದರೆ ನಿಮ್ಮ ಕಾಲಕ್ಷೇಪವು ಸುಖಕರವಾಗುತ್ತಿತ್ತು, ಮಹಾರಾಜ !"

"ಹೀಗಾದುದರಿಂದ ಇಲ್ಲಿಯ ನನ್ನ ಜೀವನವು ದುಃಸಹವಾಗಿದೆ, ದೇವೀ !"

"ಮಹಾರಾಜ ! ಇದರ ಕಾರಣ ತ್ರೈಲಪನ ಅತ್ಯಧಿಕ ಸಂದೇಹವೃತ್ತಿ. ಈಗೀಗಂತೂ ಆತನ ಸ್ವಭಾವವು ಬಹಳ ಸಂಶಯದ್ದಾಗಿದೆ. ನಿಮ್ಮ ಮಾತು ಹಾಗಿರಲಿ. ಇದೀಗ ಹೇಳಲಿಲ್ಲವೇ, ನನ್ನ ಮೇಲೆ ಕೂಡ ಆತನಿಗೆ ಇಲ್ಲದ ಸಂಶಯಗಳು."

"ದೇವೀ, ಏನು ಮಾಡಲಿ ! ನಿಮ್ಮಂತಹ ರಮಣೀರತ್ನವನ್ನು ನನ್ನ ರಾಜ್ಯದಲ್ಲಿ ಯೋಗ್ಯ ಸ್ಥಾನದಲ್ಲಿ ಇರಿಸುತ್ತಿದ್ದೆನು. ಅದಿರಲಿ, ಸ್ನೇಹಲತಾ ದೇವಿಯವರೇ ! ಈ ಹಾಳು ರಗಳೆ ಸಾಕು. ಮೊನ್ನೆಯ ತಮ್ಮ ದರ್ಶನದಲ್ಲಿ ತಾವು ನನ್ನ ಕಾವ್ಯಮಾಧುರಿಯನ್ನು ಕಿಂಚಿತ್ ಆಸ್ವಾದನ ಮಾಡಿದಂತೆ, ತಮ್ಮ ಸಂಗೀತದ ಅಭಿರುಚಿಯನ್ನು ವ್ಯಕ್ತಪಡಿಸಿದಿರಿ. ನಾನು ಇದೀಗ

ತಮಗೆ ನನ್ನ ಒಂದೆರಡು ಕವಿತೆಗಳನ್ನು ಓದಿ ತೋರಿಸುವೆ. ಅದಕ್ಕೂ ಮೊದಲು ತಮ್ಮ ಕಿನ್ನರ ಕಂಠದಿಂದ ಒಂದು ಗೀತವನ್ನು ಕೇಳಬೇಕೆಂದು ತುಂಬ ಆಶೆಯಾಗಿದೆ. ಕರುಣಿಸಬಹುದೇ, ದೇವೀ ! ”

ಸ್ನೇಹಲತೆ ಕೆಲ ನಿಮಿಷ ಮೌನವಾಗಿದ್ದಳು. “ ನಾನೇನು ಅಂತಹ ಹಾಡುಗಾತಿಯಲ್ಲ; ಸುಮ್ಮನೆ ಯಾವಾಗಲಾದರೊಮ್ಮೆ ಹೊತ್ತು ಕಳೆಯಲು ಹಾಡಿಕೊಳ್ಳುವೆ. ” ಎಂದು ಪ್ರಸ್ತಾವಿಸಿ ಸುಮಧುರ ಧ್ವನಿಯಿಂದ ಒಂದು ಹಾಡನ್ನು ಹಾಡಿದಳು. ಅದರ ಪಲ್ಲವಿ ಹೀಗೆ :

ಏನಿದು ಮನುಜನ ಬಾಳಿನ ಕನಸು ।
ಕಾನನದಲಿ ಬೆಳುದಿಂಗಳ ಸೊಗಸು ॥

ಈ ಹಾಡನ್ನು ಕೇಳಿ ಮುಂಜರಾಜನು “ ಲೇಸು, ಸೊಗಸು, ಚೆನ್ನು ! ’ ಎಂದು ಹೊಗಳಿಕೆಯ ಉದ್ಗಾರಗಳನ್ನು ಹೊರಡಿಸಿದನು. ಆ ಮೇಲೆ ಮತ್ತೆ ಉಸುರಿದನು :

“ ದೇವೀ, ಈ ಹಾಡು ನಿಮ್ಮ ಜೀವನದ ನಿರಾಶೆಯನ್ನು ಪ್ರತಿಬಿಂಬಿಸುವಂತೆ ಕಾಣುತ್ತದೆ. ರಮಣನಿಲ್ಲದ ರಮಣಿಯ ಬದುಕು ನಿಜವಾಗಿ ಕಾಡಿನಲ್ಲಿಯ ಬೆಳುದಿಂಗಳಂತೆ. ಇನ್ನು ನಾನು ರಚಿಸಿದ ಕೆಲ ಸಂಸ್ಕೃತ ಪದ್ಯಗಳನ್ನು ಹೇಳುವೆ; ಕೇಳಿ. ”

ಹೀಗೆ ಹೇಳಿ ಮುಂಜರಾಜನು ತಾನು ಹೊಸದಾಗಿ ಬರೆದ ಒಂದೆರಡು ಸಂಸ್ಕೃತ ಕವಿತೆಗಳನ್ನು ಅಂದು ತೋರಿಸಿದನು. ಅದರಲ್ಲಿ ಒಂದು ಹೀಗೆ :

ವೈರಿಣಾ ವಿಷಮಂ ಬದ್ಧಃ ಶುಕಸ್ತಿಷ್ಠತಿ ವಶ್ಯವಾಕ್ ।
ವಾಗ್ದೇವ್ಯಾಃ ಕೌತುಕಂ ಪಶ್ಯ ಭಾಗಧೇಯಸ್ಯ ವಕ್ರತಾಮ್ ॥

[ ವೈರಿಯು ಕ್ರೂರ ಬಂಧನದಲ್ಲಿರಿಸಿದರೂ ಪಂಡಿತಪಕ್ಷಿಯ (ಗಿಳಿಯ) ವಾಕ್‌ಶಕ್ತಿ ಕುಂಠಿತವಾಗಿಲ್ಲ ! ಸರಸತಿಯ ಈ ಸೋಜಿಗವನ್ನು ಲಕ್ಷಿಸು; ದೈವಗತಿಯ ಕುಟಿಲತೆಯನ್ನು ಅವಲೋಕಿಸು. ]

ಮುಂದೆ ಇನ್ನೊಂದು ದಿನ ಬರುವೆನೆಂದು ಹೇಳಿ ಸ್ನೇಹಲತೆ ಹೊರಟು ಹೋದಳು.

# [ ೧೧ ]

ಈ ಬಾರಿ ಸ್ನೇಹಲತೆ ತನ್ನ ವಚನವನ್ನು ಪಾಲಿಸಲು ಸಮರ್ಥಳಾದಳು. ಆಕೆ ಬೇಗನೆ ಮುಂಜರಾಜನ ದರ್ಶನಕ್ಕೆ ಬಂದಳು. ಆಗ ಇಬ್ಬರ ನಡುವೆ ಬಗೆಬಗೆಯ ವಾರ್ತಾಲಾಪಗಳು ನಡೆದುವು. ಇಬ್ಬರೂ ರಸಿಕರು, ಇಬ್ಬರೂ ಸ್ನೇಹಶೀಲರು, ಅವರವರ ತಿಳಿವಳಿಕೆಯಂತೆ ಇಬ್ಬರೂ ಸಮದುಃಖಿಗಳು.

ಮುಂಜರಾಜನು ಮಾಳವದೇಶದ ಸಮಾಚಾರವನ್ನು ನಿರೂಪಿಸಿದನು. ತಾನು ಉಪಭೋಗಿಸಿದ ವೈಭವವನ್ನು ವರ್ಣಿಸಿದನು. ಆಗಾಗ ಸಂಸ್ಕೃತ ಕಾವ್ಯಗಳಲ್ಲಿಯ ಮತ್ತು ಸ್ವಂತ ಕೃತಿಗಳಲ್ಲಿಯ ರಸವತ್ತಾದ ಭಾಗಗಳನ್ನು ಓದಿ ತೋರಿಸಿದನು.

ಸ್ನೇಹಲತೆ ಕರ್ನಾಟಕದ ವೃತ್ತಾಂತವನ್ನು ನಿವೇದಿಸಿದಳು. ಕರ್ನಾಟಕ ಮಹಿಳೆಯರ ಶೌರ್ಯ, ಪಾತಿವ್ರತ್ಯ ಮತ್ತು ಧರ್ಮನಿಷ್ಠೆಯ ಕತೆಗಳನ್ನು ಹೇಳಿದಳು. ಕನ್ನಡ ನಾರಿಯರ ವಿದ್ಯಾವಂತಿಕೆ, ಕಲಾವಂತಿಕೆ ಮೊದಲಾದ ಸದ್ಗುಣಗಳನ್ನು ಪ್ರಶಂಸಿಸಿದಳು. ನಡುನಡುವೆ ಆಕೆ ತನ್ನ ಜೀವನದ ಕಷ್ಟಗಳನ್ನು ತೋಡಿಕೊಂಡಳು. ವಿತಂತು ಅಬಲೆಯರ ಕರುಣಾಜನಕ ಸ್ಥಿತಿಯನ್ನು ವರ್ಣಿಸಿದಳು. ತೈಲಪ ಮತ್ತು ಸತ್ಯಾಶ್ರಯರ ಕಠೋರ ರಾಜನೀತಿಯ ಉದಾಹರಣೆಗಳನ್ನು ಚಿತ್ರಿಸಿದಳು. ಅದರ ಮೂಲಕ ತನಗೆ ಉಂಟಾಗಿದ್ದ ಬೆಂದು ಕಂಬನಿಯನ್ನು ಸುರಿಸಿದಳು. "ಚಿತ್ರಾಂಗದರು ತೋರಿಸಿಕೊಟ್ಟ ಒಂದು ಗುಪ್ತ ಉಪಾಯದಿಂದ ನಾನು ಇಲ್ಲಿಗೆ ಬಂದಿದ್ದೇನೆ. ಇಲ್ಲವಾದರೆ ನಾನು ಇತ್ತ ಬರುವುದು ಅಸಾಧ್ಯವೇ ಆಗಿತ್ತು." ಎಂದು ಗುಟ್ಟನ್ನು ಹೊರಗೆಡಹಿದಳು.

ಮುಂಜರಾಜ ಆಕೆಯ ನೊಂದ ಹೃದಯವನ್ನು ಸಮಾಧಾನಗೊಳಿಸಿದನು. "ಆಗಲಿ, ದೇವೀ! ದುಃಖವನ್ನು ಇನ್ನೂ ಎಷ್ಟು ದಿನ ಅನುಭವಿಸಬೇಕಾಗಿದೆಯೋ ನೋಡುವ. ಇದಕ್ಕೂ ಒಂದು ಕೊನೆಯಿದೆ. ಈ ಕಷ್ಟಕಾಲ ಬಹುದಿನ ಇರಲಿಕ್ಕಿಲ್ಲ." ಎಂದು ನುಡಿದನು.

ಹೀಗೆ ಹೇಳುತ್ತಿರುವಾಗ ಮುಂಜರಾಜನ ಮುಖದ ಮೇಲೆ ಯಾವುದೋ ಒಂದು ಆಶೆಯ ಬೆಳಕು ಮಿಂಚಿದಂತಾಯಿತು.

ಆ ಮೇಲೆ ಸ್ನೇಹಲತೆ ಮುಂಜರಾಜನಲ್ಲಿಗೆ ಮೇಲಿಂದ ಮೇಲೆ ಬರ ತೊಡಗಿದಳು. ಒಂದು ದಿನ ಹೀಗೆಯೇ ಆಕೆ ತನ್ನ ಕಷ್ಟವನ್ನು ಹೇಳಿಕೊಂಡಾಗ ಮುಂಜರಾಜನು ವಿಶ್ವಾಸದ ಸ್ವರದಿಂದ ಆಕೆಗೆ ಆಶ್ವಾಸನವಿತ್ತನು:

"ದೇವೀ, ದುಃಖಿಸದಿರು. ನಿನ್ನ ದುಃಖವಿಮೋಚನೆಯ ಕಾಲವು ತೀರ ಸಮೀಪಿಸಿದೆ ಎಂಬಲ್ಲಿ ಸಂದೇಹವಿಲ್ಲ. ಇನ್ನು ಮೇಲೆ ನನ್ನ ದುರ್ಭಾಗ್ಯ ಅಳಿಯುವುದು. ಅದರೊಡನೆ ನಿನ್ನ ದುರ್ಭಾಗ್ಯವೂ ಕೊನೆಗಾಣುವುದು. ಆ ಬಳಿಕ ನಮ್ಮಿಬ್ಬರ ಭಾಗ್ಯಗಳು ಒಂದಾಗಿ ನಾನು ಮಾಳವದ ಸ್ವಾಮಿ, ನೀನು ನನ್ನ ಹೃದಯದ ಸ್ವಾಮಿನಿಯಾಗುವೆ."

"ಅದು ಹೇಗೆ ಸಾಧ್ಯ, ವಾಕ್ಪತಿರಾಜರೇ! ನನಗಂತೂ ಇದೊಂದೂ ತಿಳಿಯಲೊಲ್ಲದು. ದಿನದಿನಕ್ಕೆ ತಮ್ಮ ಬಂಧನವು ಕಟುತರವಾಗುತ್ತಲಿದೆ. ತಾನೇ ಸೆರೆಯಲ್ಲಿ ಸಿಕ್ಕು ಬಿದ್ದವನು ಇನ್ನೊಬ್ಬಳನ್ನು ಸೆರೆಯಿಂದ ಬಿಡುಗಡೆ ಮಾಡುವ ಬಗೆ ಯಾವುದು?" ಸ್ನೇಹಲತೆ ಮುಂಜರಾಜನ ಹತ್ತಿರಕ್ಕೆ ಬಂದು ಮೃದುಕೋಮಲ ಸ್ವರದಿಂದ ಮೆಲ್ಲನೆ ಕೇಳಿದಳು.

ಮುಂಜರಾಜನ ಮುಖಮುದ್ರೆ ವಿಚಿತ್ರವಾಯಿತು. ನಟ್ಟ ನೋಟ ದಿಂದ ಸ್ನೇಹಲತೆಯ ಕಡೆಗೆ ನೋಡುತ್ತ ಆತನು ಒಳದನಿಯಲ್ಲಿ ಉಸುರಿದನು: "ಯಾರಿಗೂ ಹೇಳುವುದಿಲ್ಲವಷ್ಟೇ? ಇಕೋ, ಇತ್ತ ಬನ್ನಿ. ನಮ್ಮ ಬಿಡು ಗಡೆಯ ಮಾರ್ಗವು ಸಿದ್ಧವಾಗಿದೆ."

ಹೀಗೆ ಹೇಳಿ ಮುಂಜರಾಜನು ಸ್ನೇಹಲತೆಯನ್ನು ತಾನು ಮಲಗುವ ಕೋಣೆಯೊಳಗೆ ಕರೆದೊಯ್ದನು. ಅಲ್ಲಿ ಮೇಲೆ ನೆಲದಂತೆ ಕಾಣಿಸುತ್ತಿದ್ದ ಒಂದು ಹಲಗೆಯನ್ನು ತೆಗೆದನು. ಅದರ ಕೆಳಗೆ ಒಂದು ಗವಿ ಇದ್ದಿತು!

ಆ ಗವಿಯನ್ನು ತೋರಿಸುತ್ತ ಮುಂಜರಾಜನು ಕಳ್ಳದನಿಯಿಂದ ವಿವರಿ ಸಿದನು: "ದೇವೀ! ಈ ಗವಿಯ ದಾರಿ ನಿನಗಾಗಿ, ನನಗಾಗಿ ರಚಿತವಾಗಿದೆ. ಇದರ ಸೂತ್ರಚಾಲಕ ಚಿತ್ರಾಂಗದ. ಈ ಗವಿಯ ಇನ್ನೊಂದು ಬಾಯಿ ಈ ನಗರಿಯ ಆಚೆಗಿರುವ ಅಡವಿಯಲ್ಲಿದೆ. ಇನ್ನೂ ಎರಡು ದಿನ ತಾಳು. ನಾಳಿನ ಅಮಾವಾಸ್ಯೆಯ ರಾತ್ರಿ ಈ ದಾರಿಯಿಂದ ನಾವು ಹೊರಬೀಳುವೆವು. ಅತ್ತ ಅಡವಿಯಲ್ಲಿ ನಮಗಾಗಿ ಎರಡು ಪಲ್ಲಕ್ಕಿಗಳು ಬರುವುವು. ಅವುಗಳಲ್ಲಿ

ಕುಳಿತುಕೊಂಡರಾಯಿತು. ಬೆಳಗಾಗುವುದರೊಳಗೆ ನಾವೀ ತೈಲಪನ ಕುತಂತ್ರದಿಂದ ಪಾರಾಗುವೆವು. ಆದರೆ ಗೋಪ್ಯ, ಅತಿಗೋಪ್ಯ, ಪರಮ ಗೋಪ್ಯ ! ”

ಸ್ನೇಹಲತೆ ಸಂತೋಷದ ಮಂದಹಾಸವನ್ನು ಸೂಸುತ್ತ ನುಡಿದಳು : “ ನನ್ನ ಕೊರಳ ಆಣೆ. ಈ ಗುಟ್ಟು ಎಂದಿಗೂ ರಟ್ಟಾಗದು. ತಾನಾಗಿ ಬಾಯಿಗೆ ಬಂದ ಅಮೃತದ ಬಟ್ಟಲನ್ನು ಬಿಟ್ಟು ವಿಷದ ಬಟ್ಟಲಿಂದ ತೃಪ್ತಿಯನ್ನು ಬಯಸುವಂತಹ ಆತ್ಮಘಾತಕಿ ಮೂರ್ಖಳೇ ನಾನು ? ”

ಅನಂತರ ಸ್ನೇಹಲತೆ ಆನಂದದಿಂದ ಮುಂಜರಾಜನಿಗೆ “ ಹೋಗಿ ಬರುವೆ, ಅಪ್ಪಣೆ ಕೊಡಿ; ” ಎಂದು ಕೇಳಿದಳು. ಆತನು “ ಆಗಬಹುದು ” ಎಂದನು.

## [ ೧೨ ]

ಇಂದು ಅಮಾವಾಸ್ಯೆ. ಮುಂಜರಾಜನು ಹಾರೈಯಿಸಿದಂತೆ ಕರ್ನಾಟಕದ ಕಾರಾಗೃಹದಲ್ಲಿಯ ಆತನ ಕೊನೆಯ ದಿನ. ತನ್ನ ಜೊತೆಗೆ ಸ್ನೇಹಲತೆಯಾದರೂ ಬರುವಳು ಎಂಬ ವಿಚಾರದಿಂದ ಆತನ ಉಲ್ಲಾಸವು ಆಗಾಗ ಉಕ್ಕಿ ಬರುತ್ತಿದೆ.

ಮುಂಜರಾಜನು ಆತುರದಿಂದ ನಿರೀಕ್ಷಿಸುತ್ತಿದ್ದ ಮಧ್ಯರಾತ್ರಿಯ ಆ ಸಮಯವು ಬಂದು ಬಿಟ್ಟಿತು. ಇದಕ್ಕೂ ಸ್ವಲ್ಪ ಹೊತ್ತು ಮುಂಚಿನಿಂದ ಆತನ ಸುಳಿದಾಟವು ಶಾಂತವಾಗಿದ್ದಿತು. ಆತನ ವಾಸದ ಮನೆಯ ದೀಪವು ನಂದಿತ್ತು. ಶಯ್ಯಾಗೃಹದ ಬಾಗಿಲು ಮುಚ್ಚಿದ್ದಿತು. ಮುಂಜರಾಜನು ನಿದ್ದೆ ಹೋದನೆಂದು ತಿಳಿದುಕೊಂಡು ಹೊರಗಿನ ಕಾವಲು ಭಟರ ಮುಖ್ಯನು ತೂಕಡಿಸತೊಡಗಿದ್ದನು.

ಅಷ್ಟರಲ್ಲಿ ಬಾಗಿಲ ಬಳಿ ಕಾಲ ಸಪ್ಪಳು ಕೇಳಿಸಿತು. ಯಾರು ಬಂದರೆಂದು ಆ ಕಾವಲುಭಟರ ನಾಯಕನು ಎಚ್ಚತ್ತು ಕಣ್ಣೊರೆಸಿಕೊಂಡು ನೋಡಿದನು. ಬಂದ ವ್ಯಕ್ತಿ ಬಾಯಿಯ ಮೇಲೆ ಕೈಯನ್ನಿಟ್ಟು ದಾರಿ ಕೊಡಲು ಸನ್ನೆ ಮಾಡಿತು. “ ಹೋಗಬಹುದು, ತಾಯೀ ! ತಮಗಾಗಿ ಈ ಬಾಗಿಲು ಯಾವಾಗಲೂ ತೆರೆದಿದೆ. ” ಎಂದು ಕಾವಲುಭಟನು ಹೇಳಿದನು.

ಬಂದವಳು "ಬಲು ಎಚ್ಚರ, ಮಾರನಾಯಕಾ!" ಎಂದು ಹೇಳಿ ಒಳಗೆ ಪ್ರವೇಶಿಸಿದಳು. ಮುಂಜರಾಜನ ಶಯನಗೃಹದ ಬಾಗಿಲಿಗೆ ಬಂದು ಮೆಲ್ಲನೆ ಬೆರಳನ್ನು ತಟ್ಟಿ ಎರಡು ಬಾರಿ ಶಬ್ದವನ್ನು ಮಾಡಿದಳು. ಮುಂಜರಾಜನು ಬೆಳಕನ್ನು ಎತ್ತರಿಸಿ, ಅಗಳಿಯನ್ನು ಸರಿಸಿ, "ಬನ್ನಿ, ಒಳಗೆ" ಎಂದು ಕೃತ್ರಿಮದನಿಯಿಂದ ಕರೆದನು.

ಸ್ನೇಹಲತೆ ಒಳಗೆ ಹೊಕ್ಕು ಸಿದ್ಧತೆಯನ್ನು ನೋಡಿದಳು. ಮುಂಜರಾಜನು ಇಕ್ಕಟ್ಟಾದ ದಾರಿಯಿಂದ ಓಡಿಹೋಗಲು ಅನುಕೂಲವಾಗುವಂತಹ ಬಿಗುವಿನ ಉಡುಪನ್ನು ಧರಿಸಿದ್ದನು. ಆತನ ಉಡುಪು ತೀರ ಸಾಮಾನ್ಯವಾಗಿದ್ದಿತು. ಆತನ ಪಕ್ಕದಲ್ಲಿ ಭದ್ರವಾದ ಒಂದು ಚಿಕ್ಕ ಪೆಟ್ಟಿಗೆಯಿತ್ತು.

ಆಚೆಗೆ ಗವಿಯ ಬಾಯಿ ಅರ್ಧ ತೆರೆದಿತ್ತು. ಅದರೊಳಗೆ ಮಂದವಾದ ಬೆಳಕೊಂದು ಕಾಣುತ್ತಿದ್ದಿತು.

ಸ್ನೇಹಲತೆ ಏನೋ ಸಂದೇಹವುಂಟಾದವಳಂತೆ ತಾನು ತಂದಿದ್ದ ಪೆಟ್ಟಿಗೆಯನ್ನು ದೀಪದ ಬೆಳಕಿನಲ್ಲಿ ತೆರೆದು ನೋಡಿದಳು. ಆಕೆಯ ಮುಖವು ಚಂಚಲವಾಯಿತು. ಆಕೆ ಅಂಗಲಾಚಿ ಒಳದನಿಯಲ್ಲಿ ಬೇಡಿದಳು. "ವಾಕ್ಪತಿರಾಜರೇ! ಒಂದು ನಿಮಿಷ ತಡೆಯಿರಿ. ನಾನು ತರಬೇಕೆಂದಿದ್ದ ಕೈಪೆಟ್ಟಿಗೆ ಆ ಕಡೆ ಉಳಿದಿದೆ; ತಪ್ಪಿ ಬೇರೊಂದು ಇಲ್ಲಿಗೆ ಬಂದಿದೆ. ಇದರಲ್ಲಿರುವುದು ಬರಿಯ ತಾಡಪತ್ರ ಲೇಖನಗಳು ಮತ್ತು ಚಿತ್ರಗಳು. ಅದರಲ್ಲಿ ನನ್ನ ಅಮೂಲ್ಯ ಆಭರಣಗಳಿವೆ. ಅದನ್ನು ತೆಗೆದುಕೊಂಡು ಬರುವೆ."

"ಬೇಡ, ದೇವೀ! ಹೊತ್ತು ಮೀರುತ್ತಿದೆ. ನನ್ನ ರಾಜ್ಯಕ್ಕೆ ಹೋದ ಬಳಿಕ ನಿನಗೆ ಅಂತಹ ಆಭರಣಗಳು ಎಷ್ಟು ಬೇಕೋ ಅದಕ್ಕೂ ಹೆಚ್ಚಾಗಿ ಮಾಡಿಸಿಕೊಡುವೆ. ನಡೆ, ಹೊರಡುವ." ಮುಂಜರಾಜನು ನಸು ಗಾಬರಿಯಿಂದ ಹೇಳಿದನು.

"ಹಾಗಲ್ಲ, ವಾಕ್ಪತಿರಾಜರೇ! ನಾನು ಬರಿ ಆಭರಣಗಳಿಗಾಗಿ ಆಸೆಪಡುವುದಿಲ್ಲ. ಆ ಪೆಟ್ಟಿಗೆಯಲ್ಲಿಯ ಆಭರಣಗಳು ನನ್ನ ಜೀವದಷ್ಟೇ ನನಗೆ ಪ್ರಿಯವಾಗಿವೆ. ಒಂದು ರತ್ನಹಾರ, ಇನ್ನೊಂದು ಹರಳಿನ ಉಂಗುರ; ಮತ್ತೊಂದು ನನ್ನ ಪ್ರಾಣನಾಥರ ವಿಗ್ರಹವನ್ನು ಕೆತ್ತಿದ ಚಿನ್ನದ ಪದಕ.

ಇವು ನನ್ನ ವಿವಾಹಮಂಗಲದ ಸ್ಮಾರಕಗಳು. ನನ್ನ ಗತ ಸೌಭಾಗ್ಯದ ಚಿಹ್ನೆಗಳು. ಒಂದೇ ನಿಮಿಷ!”

“ದೇವೀ, ಎಲ್ಲಿದೆ ಆ ಪೆಟ್ಟಿಗೆ?” ಮುಂಜರಾಜನು ಬೇಸರದಿಂದ ಕೇಳಿದನು.

“ಆ ಬಾಗಿಲ ಹೊರಗೆ. ಮೊದಲು ಈ ಎರಡು ಪೆಟ್ಟಿಗೆಗಳನ್ನು ಒಯ್ಯ ಬೇಕೆಂದು ತೆಗೆದುಕೊಂಡು ಬಂದೆನು. ಅನಂತರ ಅದೊಂದಾದರೆ ಸಾಕು ಎಂದು ತೋರಿತು. ಇಲ್ಲಿ ಒಳಗೆ ಬರುವಾಗ ಮಾತ್ರ ಮುಖ್ಯವಾದ ಅದನ್ನು ಬಿಟ್ಟು ಇದನ್ನು ಇಲ್ಲಿಗೆ ತಂದೆನು.” ಸ್ನೇಹಲತೆ ದೈನ್ಯದಿಂದ ವಿವರಿಸಿದಳು.

“ಸರಿ, ಆಗಬಹುದು. ಬೇಗ ಬನ್ನಿ.” ಖಿನ್ನ ಮನಸ್ಸಿನಿಂದ ಮುಂಜರಾಜನು ಅನುಮತಿಸಿದನು.

“ಹೊತ್ತು ಮಾಡುವುದಿಲ್ಲ, ಮಾಳವೇಶಾ! ಒಂದು ನಿಮಿಷ, ಒಂದೇ ನಿಮಿಷ; ಇದೀಗ ಬಂದೇ ಬಿಟ್ಟೆನು.” ಎನ್ನುತ್ತ ಸ್ನೇಹಲತೆ ಅವಸರದಿಂದ ಹೊರಗೆ ಬಂದಳು. ಮುಂಜರಾಜನ ಶಯ್ಯಾಗೃಹದ ಬಾಗಿಲು ಮುಚ್ಚಿತು.

ನಾಲ್ಕು ನಿಮಿಷಗಳು ಉರುಳಿದುವು. ಈ ನಾಲ್ಕು ನಿಮಿಷಗಳು ನಾಲ್ಕು ಯುಗಗಳಂತೆ ತೋರಿದುವು ಮುಂಜರಾಜನಿಗೆ. ಅಷ್ಟರಲ್ಲಿ ಬಲವಾದ ಕಾಲಸಪ್ಪಳು ಆತನಿಗೆ ಕೇಳಿಸಿತು. ಆ ಶಬ್ದವು ಒಳಗೆ ಬರಲು ಆತನು, “ದೇವೀ, ಕೊನೆಗೆ ಬಂದು ಬಿಟ್ಟಿಯಾ?” ಎಂದು ನಡುಕದಿಂದ ಕೇಳಿದನು.

ಈಗ ಬಂದ ವ್ಯಕ್ತಿ ಬಾಗಿಲನ್ನು ಹಠಾತ್ತಾಗಿ ದೂಡಿತು. ಆ ಬಾಗಿಲು ತೆರೆಯುತ್ತಿರುವಾಗ ಅದರ ಮುಖದಿಂದ ಹೊರಟ, “ದೇವಿಯಲ್ಲ, ದೇವ! ನಿನ್ನ ಪಾಲಿನ ದೆವ್ವ!” ಎಂಬ ಘೋರ ಉದ್ಗಾರಗಳು ಮುಂಜರಾಜನ ಕರ್ಣರಂಧ್ರದಲ್ಲಿ ಅಪ್ಪಳಿಸಿದುವು.

ಬಂದ ವ್ಯಕ್ತಿ ಮುಂಜರಾಜನ ಶಯನಗೃಹದಲ್ಲಿ ನುಗ್ಗಿ ಗವಿಯ ಬಾಗಿಲಿಗೆ ಹೋಗಿ ನಿಂತಿತು. “ಬೇಗ ಬೇಗ, ಮಾರನಾಯಕಾ, ಸಿಂಗನಾಯಕಾ! ಹೂಂ, ಬಿಗಿಯಿರಿ ಇವನನ್ನು.” ಎಂದು ಭೀಕರವಾಗಿ ಗದ್ದರಿಸಿತು.

ಮಾರನಾಯಕ ಸಿಂಗನಾಯಕರು ಕೂಡಲೆ ಒಳಗೆ ಧುಮುಕಿ ಮುಂಜ ರಾಜನನ್ನು ಹಗ್ಗದಿಂದ ಬಿಗಿದರು; ಆತನ ಕೈಗಳನ್ನು ಕಟ್ಟಿದರು.

ಇದೆಲ್ಲವೂ ಕ್ಷಣಾರ್ಧದಲ್ಲಿ ನಡೆದು ಹೋಯಿತು. ಮುಂಜರಾಜನಿಗೆ ನಸುಹೊತ್ತು, ಇದೇನು ಸಮಾಚಾರ, ಎಂಬ ಅರಿವೇ ಉಂಟಾಗಲಿಲ್ಲ. ಆತನು ಹುಚ್ಚು ಹಿಡಿದವನಂತೆ ನಟ್ಟ ದಿಟ್ಟಿಯಿಂದ ಆ ಅಧಿಕಾರಿ ವ್ಯಕ್ತಿಯನ್ನು ಎವೆಯಿಕ್ಕದೆ ನೋಡಿದನು. ಮರುಗಳಿಗೆಯಲ್ಲಿ, "ಹಾ ತೈಲಪಕುಮಾರ! ಹಾ ಸತ್ಯಾಶ್ರಯ! ಹಾ, ಇರಿವ ಬೆಡಂಗ! ಘಾತವಾಯಿತು! ಮಹಾಕಾಲನೇ ಗತಿ!" ಎಂದು ದೀನಸ್ವರದಿಂದ ನುಡಿದು ದೊಪ್ಪನೆ ನೆಲದ ಮೇಲೆ ಕುಸಿದನು.

## [ ೧೩ ]

ಮರುದಿನ ಸಾಯಂಕಾಲ ತೈಲಪ ಸತ್ಯಾಶ್ರಯರು ಬಂಧನಾಗಾರದಲ್ಲಿ ಮುಂಜರಾಜನನ್ನು ಸಂಧಿಸಿದರು. ಈಗ ಮಾತ್ರ ಮುಂಜರಾಜನ ಕಾರಾಗೃಹವು ನಿಜವಾಗಿ ಕಾರಾಗೃಹವಾಗಿದ್ದಿತು. ಒಂದೇ ಒಂದು ಚಿಕ್ಕ ಕೋಣೆ. ಅದಕ್ಕೆ ಉಕ್ಕಿನ ಕಂಬಿಗಳನ್ನು ನೆಟ್ಟ ಚಿಕ್ಕ ಬಾಗಿಲು. ಹೊರಗೆ ಹದಿನಾರು ಜನ ಭೀಕರ ಕಾವಲುಭಟರು! ಇಂತಹ ಸ್ಥಿತಿಯಲ್ಲಿದ್ದ ಆತನನ್ನು ನೋಡಿದರೆ ಪಂಜರದಲ್ಲಿಯ ಹುಲಿಯು ನೆನಪಿಗೆ ಬರುತ್ತಿದ್ದಿತು.

ಒಂದು ನಿಮಿಷ ಬಾಗಿಲ ಬಳಿಯಲ್ಲಿ ನಿಂತು ತೈಲಪನು ಮಾತನ್ನಾರಂಭಿಸಿದನು :

"ಮುಂಜರಾಜಾ! ನಿನ್ನನ್ನು ಈ ಸ್ಥಿತಿಯಲ್ಲಿ ನೋಡಿ ನನಗೆ ಅತ್ಯಂತ ವಿಷಾದವಾಗುತ್ತದೆ. ನಿನಗೆ ಈ ಭವಿತವ್ಯವನ್ನು ತಪ್ಪಿಸಲು ನಾನು ಬಹುವಾಗಿ ಪ್ರಯತ್ನಿಸಿದೆನು. ಆದರೆ ವಿಧಿಯ ದುರ್ವಿಲಾಸವು ವಿಚಿತ್ರವಾದುದು. ಕೊನೆಗೆ ಈ ಘೋರ ದೆಸೆ ನಿನಗೆ ತಪ್ಪಲಿಲ್ಲ. ನೀನು ನನಗೆ ಸರಿಸಮಾನನಾದ ಮಹಾರಾಜನು! ನಿನ್ನನ್ನು ಹೆಸರಿಗೆ ಮಾತ್ರ ಬಂಧನದಲ್ಲಿರಿಸಿ ನಿನ್ನ ಗೌರವಕ್ಕೆ ತಕ್ಕಂತೆ ನಿನ್ನೊಡನೆ ನಡೆದುಕೊಳ್ಳಬೇಕೆಂದು ನಾನು ಇಚ್ಛಿಸಿದೆನು. ಆದರೆ ಆ ನನ್ನ ಇಚ್ಛೆ ಕೈಗೂಡಲಿಲ್ಲ."

ತೈಲಪನು ಕ್ಷಣಹೊತ್ತು ಸುಮ್ಮನಾದನು. ಮುಂಜರಾಜನು ಮಾತಾಡಲಿಲ್ಲ. ತೈಲಪನು ಮಾತನ್ನು ಮುಂದುವರಿಸಿದನು :

“ ನಿನ್ನ ಸ್ವಭಾವವನ್ನು ನಾನು ಅರಿಯದೆ ಇಲ್ಲ, ಮುಂಜರಾಜ! ಅಂತೆಯೇ ನಾನು ನಿನಗೆ ಕೆಲ ನಿಯಮಗಳನ್ನು ಸೂಚಿಸಿದೆನು. ನಿನ್ನ ರಾಜ್ಯದಲ್ಲಿಯ ಮಾತು ಹಾಗಿರಲಿ, ಈ ಸೆರೆಮನೆಯಲ್ಲಿಯಾದರೂ ನೀನು ಹೆಚ್ಚು ವಿವೇಕ ಮತ್ತು ಸಂಯಮದಿಂದ ವರ್ತಿಸಬೇಕಾಗಿದ್ದಿತು. ಇದರಲ್ಲಿ ನಿನ್ನ ಹಿತವಿತ್ತು. ಆದರೆ ನೀನು, ನಾನು ನಿರ್ದೇಶಿಸಿದ ನಿಯಮಗಳನ್ನು ಸ್ವಲ್ಪವಾದರೂ ಆಸ್ಥೆಯಿಂದ ಪಾಲಿಸಲಿಲ್ಲ. ಅದಕ್ಕಾಗಿ ಈ ಮೊದಲೇ ನಾನು ನಿನ್ನನ್ನು ರಾಜಶಾಸನಕ್ಕೆ ಗುರಿ ಮಾಡಬಹುದಾಗಿದ್ದಿತು. ಹಾಗೆ ಮಾಡದೆ ನಾನು ಸಹನೆಯನ್ನು ತಾಳಿದೆನು ಕೊನೆಗೆ ನಾನು ಕೊಟ್ಟ ಸೌಕರ್ಯಗಳಿಗೆ ನೀನು ಅರ್ಹನಲ್ಲವೆಂದು ತೀರ್ಮಾನಿಸಿ ಅವುಗಳನ್ನು ನಿಲ್ಲಿಸಿದೆನು. ”

ತೈಲಪನು ನಸುಹೊತ್ತು ಮೌನವಾದನು. ಆದರೆ ಮುಂಜರಾಜನು ಬಾಯಿ ಬಿಚ್ಚಲಿಲ್ಲ.

“ ಮುಂಜರಾಜ! ಆ ಮುಂದಿನ ನಿನ್ನ ರೀತಿ ಅತ್ಯಂತ ಆಕ್ಷೇಪಾರ್ಹವಾಗಿದೆ. ನಿನ್ನಂತಹ ಯೋಗ್ಯತಾಸಂಪನ್ನನು ಆ ವಿಧವಾಗಿ ವರ್ತಿಸಬಾರದಾಗಿದ್ದಿತು. ”

ಈ ಸಲ ಮಾತ್ರ ಮುಂಜರಾಜನು ಆಕ್ರೋಶದಿಂದ ಚೀರಿದನು: “ ತೈಲಪರಾಜ! ಯಾರ ವರ್ತನೆ ಆಕ್ಷೇಪಾರ್ಹವು? ನನ್ನದೋ ನಿನ್ನದೋ? ಪುರುಷರನ್ನು ಅಡ್ಡದಾರಿಗೆ ಒಯ್ಯುವಂತಹ ಆ ಮಾಯಾವಿನಿಯನ್ನು ನೀನು ನನ್ನ ಬಳಿಗೆ ಕಳುಹಿ ನನ್ನನ್ನು ವಂಚಿಸಿದುದಕ್ಕಾಗಿ ನಿನಗೆ ಶತಶಃ ಧಿಕ್ಕಾರಗಳು! ”

ತೈಲಪನು ಶಾಂತವಾಗಿ ಮುಂದುವರಿದನು: “ ಮುಂಜರಾಜ! ವಿಚಾರ ಮಾಡು. ಅಡ್ಡದಾರಿಗೆ ಹೋಗುವವರು ಯಾರು? ಪುರುಷರೋ ಸ್ತ್ರೀಯರೋ? ಶತ್ರುರಾಜನ ರಾಜಧಾನಿಯಲ್ಲಿ ಬಂಧನವನ್ನು ಅನುಭವಿಸುತ್ತಿದ್ದ ನಿನಗೆ ದೇಶ ಕಾಲ ಪಾತ್ರಗಳ ವಿವೇಕ ಉಳಿಯಲಿಲ್ಲ. ನೀನು ನಿನ್ನ ಮನಸ್ಸನ್ನು ಸ್ವಾಧೀನದಲ್ಲಿ ಇರಿಸಿಕೊಳ್ಳಲಿಲ್ಲ. ಅದನ್ನು ಹರಿಬಿಟ್ಟೆ. ”

ಮತ್ತೆ ಕೆರಳಿ ಮುಂಜರಾಜನು ಕೂಗಾಡಿದನು: “ ಆ ಗಯ್ಯಾಳಿ ನಿನ್ನ ಕಪಟನಾಟಕದಲ್ಲಿಯ ಪ್ರಧಾನ ನಟಿ. ಆದರೆ ಅವಳಿಗೂ ನನ್ನ ಜೊತೆಗೆ ನನ್ನ ರಾಜ್ಯಕ್ಕೆ ಓಡಿ ಹೋಗಬೇಕೆಂಬ ಆಸೆ ಇದ್ದೇ ಇದ್ದಿತು! ”

ತೈಲಪನು ನಿಶ್ಚಯದ ಸ್ವರದಲ್ಲಿ ನುಡಿದನು: "ತಪ್ಪು ಸರ್ವತಃ ತಪ್ಪು. ಮುಂಜರಾಜ, ಸ್ನೇಹಲತೆ ನನ್ನ ಹತ್ತಿರದ ಆಪ್ತಳು. ನಮ್ಮ ಚಲುಕ್ಯವಂಶ ದಲ್ಲಿ ಮೇಧಾವಿನಿಯರಾದ ಅನೇಕ ಮಹಿಳೆಯರು ಪ್ರಕಾಶಿಸಿರುವರು. ಕೆಲ ವರು ರಾಜ್ಯಭಾರದಲ್ಲಿ ಕುಶಲೆಯರು; ಕೆಲವರು ರಾಜ್ಯತಂತ್ರದಲ್ಲಿ ನುರಿತ ವರು. ಇಂತಹ ವರ್ಗಕ್ಕೆ ಸೇರಿದವಳು ಸ್ನೇಹಲತೆ. ನನ್ನ ಅನೇಕ ರಾಜಕೀಯ ಉದ್ದೇಶಗಳನ್ನು ನೆರವೇರಿಸುವಲ್ಲಿ ಸ್ನೇಹಲತೆ ನನಗೆ ಬಹುವಾಗಿ ಸಹಾಯ ಮಾಡಿದ್ದಾಳೆ. ಆಕೆ ಗಯ್ಯಾಳಿಯಲ್ಲ; ಸಾಧ್ವಿ. ಅಂತಹ ಸಂದರ್ಭ ಬಂದರೆ ತನ್ನ ಪಾವಿತ್ರ್ಯವನ್ನು ಕಾಪಾಡುವುದಕ್ಕಾಗಿ ಆತ್ಮಬಲಿ ಕೊಡಲು ಆಕೆ ಯಾವಾಗಲೂ ಸಿದ್ಧಳಾಗಿದ್ದಳು. ನಿನ್ನ ವರ್ತನೆಯನ್ನೆಲ್ಲ ಚಾಚೂ ಬಿಡದೆ ನನಗೆ ಉಸುರುತ್ತಿದ್ದಳು. ನಿನ್ನ ಪಾಪದೃಷ್ಟಿಗೆ ಸಾಧ್ವಿಯರು ಕುಲಟೆಯ ರಾಗಿ ಕಾಣುವುದು ಸಹಜ. ಅದಿರಲಿ, ಮುಂಜರಾಜ! ಹೆಚ್ಚಿಗೆ ಮಾತನ್ನು ಬೆಳಸಿ ನಿನ್ನನ್ನು ನೋಯಿಸುವುದು ನನಗೆ ಇಷ್ಟವಿಲ್ಲ. ಈಗಾದರೂ ನಿನಗೆ ಸುಬುದ್ಧಿ ಬರಲಿ; ಪಶ್ಚಾತ್ತಾಪದಿಂದ ನಿನ್ನ ಅಂತಃಕರಣವು ಶುದ್ಧವಾಗಲಿ; ಎಂದು ಹಾರಯಿಸುವೆ.

"ನಾನು ಈ ಹಿಂದೆ ನಿನ್ನನ್ನು ಎಚ್ಚರಿಸಿದಂತೆ ರಾಜಶಾಸನವು ಕಠೋರ ವಾದುದು. ಅದಕ್ಕಾಗಿ ನೀನು ಸಿದ್ಧನಾಗು. ಕ್ಷಿಪ್ರದಲ್ಲಿ ನಿನ್ನ ಜೋತೆಗೆ ನಿನ್ನ ದುರ್ಮಂತ್ರಿ ಚಿತ್ರಾಂಗದನಾದರೂ ವಿಚಾರಣೆಗೆ ಗುರಿಯಾಗುವನು."

ಮುಂಜರಾಜನು ಆತುರದಿಂದ ಕೇಳಿದನು: "ಚಿತ್ರಾಂಗದನ ಸಮಾ ಚಾರವೇನು?"

"ಬೇರೇನು ಸಮಾಚಾರ? ನಿನ್ನ ದುರ್ಮಾರ್ಗಕ್ರಮಣದಲ್ಲಿ ನಿನಗೆ ಸಹಾಯ ಮಾಡಿದ್ದಕ್ಕಾಗಿ ಆತನೂ ನಿನ್ನಷ್ಟೇ ಅಪರಾಧಿ. ಚಿತ್ರಾಂಗದನು ನಿನ್ನ ಹಾಗೆಯೇ ಕ್ರೂರ ಬಂಧನದಲ್ಲಿರುವನು.

"ಮುಂಜರಾಜ! ಕೊನೆಗೆ ನಿನಗೊಂದು ಪ್ರಶ್ನೆ ಮಾಡುವೆ. ಒಂದು ಕ್ಷಣ ನೀನು ನನ್ನ ಸ್ಥಿತಿಯಲ್ಲಿ ಮತ್ತು ನಾನು ನಿನ್ನ ಸ್ಥಿತಿಯಲ್ಲಿ ಇದ್ದೇನೆಂದು ಇಟ್ಟುಕೋ. ಆಗ ನೀನು ನನಗೆ ಏನನ್ನು ಮಾಡುತ್ತಿದ್ದೆ?"

ಒಂದು ನಿಮಿಷ ಸುಮ್ಮನಿದ್ದು ಮುಂಜರಾಜನು ಉತ್ತರಿಸಿದನು; "ದೇಹಾಂತ ಶಿಕ್ಷೆ."

ಮುಂಜರಾಜನತ್ತ ಗಂಭೀರವಾದ ಒಂದು ನೋಟವನ್ನು ಬೀರಿ ತೈಲಪ ಸತ್ಯಾಶ್ರಯರು ಆ ಬಂಧನಾಗಾರದಿಂದ ಮರಳಿದರು.

[ ೧೪ ]

ಮುಂಜರಾಜನಿಂದ ದ್ರವ್ಯ, ಸನ್ಮಾನ, ಸಂಭಾವನೆ, ವೃತ್ತಿ ಮೊದಲಾದ ಬಗೆಬಗೆಯ ಉಪಕಾರಗಳನ್ನು ಪಡೆದಿದ್ದ ಉತ್ತರ ಭಾರತದ ಅನೇಕ ವಿದ್ವಾಂಸರು ಮತ್ತು ಕವಿಗಳು ಆತನನ್ನು ಬಂಧನದಲ್ಲಿರಿಸಿದ ತೈಲಪರಾಜನ ಮತ್ತು ಕರ್ನಾಟಕದ ವಿರುದ್ಧವಾಗಿ ಅಪಪ್ರಚಾರಗಳನ್ನು ನಡೆಸಿದ್ದರು. ಈ ವರ್ತಮಾನಗಳು ತೈಲಪರಾಜನಿಗೆ ತಿಳಿದಿದ್ದುವು. ಮುಂಜರಾಜನಿಗೆ ಅನೇಕ ವೈರಿಗಳಿದ್ದು ಅವರು ಆತನನ್ನು ದ್ವೇಷಿಸುತ್ತಿದ್ದರು ಎಂಬುದು ನಿಜ. ಆದರೆ ಆತನನ್ನು ಆದರಿಸುವ ಜನಗಳ ಸಂಖ್ಯೆ ಕಡಿಮೆ ಇರಲಿಲ್ಲ. ಆತನೊಬ್ಬ ಪ್ರಖ್ಯಾತರಾಜನಾಗಿದ್ದನು. ಕರ್ನಾಟಕ ರಾಜನ ಬಂಧನದಲ್ಲಿದ್ದ ಆತನ ಬಿಡುಗಡೆ ಮಾಡಬೇಕೆಂದು ಆತನ ಪಕ್ಷಪಾತಿಗಳನೇಕರು ಬಲವಾದ ಪ್ರಯತ್ನಗಳನ್ನು ನಡೆಸಿದ್ದರು. ಆತನನ್ನು ಬಹುಕಾಲ ಸುಮ್ಮನೆ ಬಂಧನದಲ್ಲಿ ಉಳಿಸಿದರೆ ಹೆಚ್ಚಿನ ಕ್ಷೋಭೆಗೂ ಗೊಂದಲಕ್ಕೂ ಕಾರಣವಾಗಿ, ರಾಜಕೀಯ ಗಂಡಾಂತರಗಳು ಉದ್ಭವಿಸುವುವು ಎಂಬುದಾಗಿ ತೈಲಪನು ದೂರದೃಷ್ಟಿಯಿಂದ ಆಲೋಚಿಸಿದನು.

ಅಷ್ಟರಲ್ಲಿ ಅಮಾವಾಸ್ಯೆಯ ಆ ವಿಷಮ ಘಟನೆಸಂಭವಿಸಿತು. ಆದುದರಿಂದ ಮುಂಜರಾಜ ಮತ್ತು ಚಿತ್ರಾಂಗದರನ್ನು ಬೇಗನೆ ವಿಚಾರಣೆಗೆ ಗುರಿಮಾಡಿ ಅವರ ಪ್ರಕರಣಗಳನ್ನು ಮುಗಿಸಿಬಿಡುವುದಾಗಿ ತೈಲಪನು ನಿರ್ಧರಿಸಿದನು.

ಇತ್ತ ತೈಲಪ ಸತ್ಯಾಶ್ರಯರು ಮುಂಜರಾಜನನ್ನು ಆತನ ಹೊಸ ಸೆರೆಮನೆಯಲ್ಲಿ ಕಂಡು ಹೋದಾಗಿನಿಂದ ಆತನ ಮನಃಸ್ಥಿತಿ ವಿಲಕ್ಷಣವಾಯಿತು. ಆತನು ಕೆಲಹೊತ್ತು ಬಾಗಿಲ ಕಡೆಗೆ ಬೆನ್ನು ಮಾಡಿ ಶೂನ್ಯ ದೃಷ್ಟಿಯಿಂದ

ಒಂದೇ ಸವನೆ ಒಂದು ಮೂಲೆಯನ್ನು ನೋಡುತ್ತ ಕೂಡುವನು. ಆ ಮೇಲೆ ಒಮ್ಮಿಂದೊಮ್ಮೆ ದಿಗ್ಗನೆ ಎದ್ದುನಿಂತು ಜಿಗಿದಾಡುವನು. ಕಾವಲುಗಾರರು ಏನನ್ನಾದರೂ ಕೇಳಿದರೆ ಉತ್ತರವೇ ಇಲ್ಲ. ಆಗಾಗ ಏನೇನೋ ಸಂಸ್ಕೃತ ಪದ್ಯಗಳನ್ನು ಗೊಣಗುಟ್ಟುವನು. ಒಮ್ಮೆ ನಗುವನು; ಒಮ್ಮೆ ಅಳುವನು. "ಹಾ ನನ್ನ ಹಾಳು ದೈವವೇ!" ಎಂದು ಹಣೆಯನ್ನು ಜಜ್ಜಿಕೊಳ್ಳುವನು. "ನಾನು ಅಮರನಾಗುವೆ. ಸಂಸ್ಕೃತ ಸರಸ್ವತಿಯಿರುವ ವರೆಗೆ ನನ್ನ ಕವನಗಳು ಬಾಳುವುವು. ನನ್ನ ಕವನಗಳು ಬಾಳುವವರೆಗೆ ನನ್ನ ಸ್ಮೃತಿ ಈ ಲೋಕದಲ್ಲಿ ನಿಲ್ಲುವುದು. ಇಂತು ನನಗೆ ಸಾವೆಲ್ಲಿ? ನಾನು ಅಮರನಾಗುವೆ! ನಾನು ಅಮರನಾಗುವೆ!'' ಎಂದು ಅಟ್ಟಹಾಸದಿಂದ ಕೇಕೆ ಹಾಕುವನು.

ಇನ್ನೊಮ್ಮೆ, "ರುದ್ರಭಾನುಮಂತ್ರಿಯ ಆ ಜ್ಯೋತಿಷಿ ನುಡಿದ ಭವಿಷ್ಯವು ಸತ್ಯವಾಯಿತು. ಮಾಳವದ ಅಧಿದೈವತ ಮಹಾಕಾಲದೇವಾ! ಕೊನೆಗೆ ನೀನು ನನ್ನನ್ನು ಕೈಬಿಟ್ಟೆಯಾ? ಅಯ್ಯೋ, ಅಯ್ಯೋ, ಅಯ್ಯೋ!!" ಎಂದು ಉದ್ವೇಗದಿಂದ ರೋದನಮಾಡುವನು.

ಆ ರಾಜಬಂದಿ ಅನ್ನ ನೀರನ್ನು ವರ್ಜಿಸಿದನು. ಹೀಗೆ ಎರಡು ದಿನಗಳು ಕಳೆದುವು. ಮರುದಿನ ಆತನ ವಿಚಾರಣೆ. ಅಂದಿನ ಬೆಳಗಿನಲ್ಲಿ ಕಾವಲುಭಟರ ಮುಖ್ಯನು ಒಳಗೆ ಹಣೆಯಿಕ್ಕಿ ನೋಡಿದನು. ಮುಂಜರಾಜನು ನಿಶ್ಚೇಷ್ಟನಾಗಿ ಅಸ್ತವ್ಯಸ್ತ ಬಿದ್ದುಕೊಂಡಿದ್ದಾನೆ! ಈ ಸಮಾಚಾರವನ್ನು ಆತನು ಕೂಡಲೆ ತೈಲಪರಾಜನಿಗೆ ತಿಳಿಸಿದನು. ತೈಲಪನು ಸತ್ಯಾಶ್ರಯನನ್ನು ಮತ್ತು ರಾಜವೈದ್ಯನನ್ನು ಕರೆದುಕೊಂಡು ತ್ವರೆಯಿಂದ ಅಲ್ಲಿಗೆ ಬಂದನು.

ರಾಜವೈದ್ಯನು ಒಳಹೊಕ್ಕು ಮುಂಜರಾಜನ ದೇಹವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದನು. ಸ್ವಲ್ಪ ಹೊತ್ತಾದ ಬಳಿಕ ಆತನು, "ವತ್ಸನಾಭಿ ವಿಷಸೇವನದಿಂದ ಮುಂಜರಾಜನಿಗೆ ಮರಣವು ಸಂಭವಿಸಿದೆ" ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದನು.

ರಾತ್ರಿಯಲ್ಲಿ ಸೆರೆಮನೆಯನ್ನು ಕಾಯುತ್ತಿದ್ದ ಕಾವಲುಭಟರನ್ನು ಒಬ್ಬೊಬ್ಬರನ್ನಾಗಿ ವಿಚಾರಿಸಲಾಯಿತು. ಅವರ ಹೇಳಿಕೆಗಳಿಂದ ಈ ಸಂಗತಿಗಳು ಹೊರಗೆ ಬಂದುವು. ಮುಂಜರಾಜನು ರಾತ್ರಿಯಲ್ಲಿ ಬಹಳ ಹೊತ್ತಿನ

ವರೆಗೆ ಭ್ರಮಿಷ್ಟನಂತೆ ಕುಳಿತಿದ್ದನಂತೆ. ಒಮ್ಮೆ ದೀನ ಸ್ವರದಿಂದ ಈ ಹಾಡನ್ನು ಮತ್ತೆ ಮತ್ತೆ ಹಾಡಿದನಂತೆ:

ಕರಿಘಟೆಗಳು ಹದಿನಾಲ್ಕುನೂರ್, ಮೇಲ್ ಎಪ್ಪತ್ತಾರು
ನನಗಿದ್ದುವು; ಹೋದುವು, ಎಲ್ಲವೂ ಹೋದುವು।
ಆ ತುರಗ ರಥ ಪದಾತಿಗಳು; ಅಗಣಿತ
ದಾಸ ದಾಸಿಯರು; ಹಾ! ಈಗೊಬ್ಬರೂ ಇಲ್ಲ॥
ಸ್ವರ್ಗಸ್ಥ ಮಂತ್ರಿವರ ರುದ್ರಭಾನು
ಓ ಬಂದೆ, ಬಂದೆ ನಿನ್ನ ಬಳಿಗೆ॥

ಇನ್ನೊಮ್ಮೆ ಈ ಇನ್ನೊಂದು ಕವನವನ್ನು ನುಡಿದನಂತೆ:

ವಾನರನೆ! ಕಾಣದಿರು ವಾನರಿಯ
ಸುಂದರಿಯ, ನರಬಲಿಪ್ರಿಯ ಮಾರಿಯ।
ನಾರಿಯಿಂದಲೆ ಕೆಟ್ಟನಾರಾವಣನು
ವಾಲಿಯೂ, ಕೀಚಕನು॥
ಇಂತೆನಿಬರೋ, ಎನಿಬರೋ, ಎನಿಬರೋ,
ಅಂತಿವನು, ಈ ಮುಂಜನೂ॥

ಆ ಮೇಲೆ ಇನ್ನೊಬ್ಬ ಕಾವಲುಭಟನು, ಆತನು ಗೋಡೆಯ ಮೇಲೆ ಏನನ್ನೋ ಬರೆಯುತ್ತಿದ್ದುದನ್ನು ಕಂಡನಂತೆ.

ಬಳಿಕ ತೈಲಪ ಸತ್ಯಾಶ್ರಯರು ಕಾರಾಗೃಹದ ಕೋಣೆಯ ಒಳಗೆ ಪ್ರವೇಶಿಸಿ ಲಕ್ಷ್ಯಪೂರ್ವಕವಾಗಿ ಎಲ್ಲವನ್ನೂ ಅವಲೋಕಿಸಿದರು. ಆಗ ಒಳಗೆ ಗೋಡೆಯ ಮೇಲೆ ಇದ್ದಲಿಯಿಂದ ಬರೆದ ಒಂದು ಬರೆಹವು ಸತ್ಯಾಶ್ರಯನ ಕಣ್ಣಿಗೆ ಬಿದ್ದಿತು. ಅದನ್ನು ಆತನು ತಂದೆಗೆ ತೋರಿಸಿದನು. ಮುಂಜರಾಜನು ಅಂತ್ಯಕಾಲದಲ್ಲಿ ಬರೆದಿಟ್ಟ ಪದ್ಯವದು, ಎಂಬುದಾಗಿ ಆ ಪಿತಾಪುತ್ರರು ತಿಳಿದುಕೊಂಡರು. ಆ ಪದ್ಯವು ಹೀಗೆ:

ಲಕ್ಷ್ಮೀರ್ಯಾಸ್ಯತಿ ಗೋವಿಂದೇ
ವೀರಶ್ರೀರ್ವೀರವೇಶ್ಮನಿ।

**ಗತೇ ಮುಂಜೇ ಯಶಃಪುಂಜೇ**
**ನಿರಾಲಂಬಾ ಸರಸ್ವತೀ ॥**

[ ಯಶೋಮೂರ್ತಿಯಾದ ಈ ಮುಂಜರಾಜನು ನಿಧನ ಹೊಂದಿದ ಬಳಿಕ ಇಷ್ಟು ದಿನಗಳ ವರೆಗೆ ಈತನಲ್ಲಿ ವಾಸವಾಗಿದ್ದ ಲಕ್ಷ್ಮಿಯು ಶ್ರೀವಿಷ್ಣುವಿನ ಸನ್ನಿಧಿಯನ್ನು ಹೊಂದುವಳು. ಈತನಲ್ಲಿ ಮನೆಮಾಡಿಕೊಂಡಿದ್ದ ವೀರಶ್ರೀ ವೀರರ ಮನೆ ಮನೆಗಳಲ್ಲಿ ಆಶ್ರಯ ಪಡೆಯುವಳು. ಆದರೆ, ಅಯ್ಯೋ ಪಾಪ! ಆ ಸರಸ್ವತಿಯು ಮಾತ್ರ ತನಗೆ ತಕ್ಕ ಸ್ಥಳ ದೊರೆಯದೆ ನಿರಾಧಾರಳಾಗುವಳು. ]

ಈ ಪದ್ಯದ ಉತ್ಕಟಭಾವವು ಅಂತಃಕರಣದಲ್ಲಿ ಪ್ರವೇಶ ಮಾಡಿದಂತೆ ತೈಲಪ ಸತ್ಯಾಶ್ರಯರ ಹೃದಯಗಳು ಶೋಕವಿಹ್ವಲವಾದುವು. ಅವರು ಕ್ಷಣ ಹೊತ್ತು ಕಲ್ಲು ಗೊಂಬೆಯಂತೆ ನಿಂತುಕೊಂಡರು. ತೈಲಪನ ಕಣ್ಣುಗಳಲ್ಲಿ ಕಂಬನಿ ಮೂಡಿತು. ಈ ಪದ್ಯದ ಎರಡನೆಯ ಭಾಗವನ್ನು ಎತ್ತಿಕೊಂಡು ಸತ್ಯಾಶ್ರಯನು ತನ್ಮಯತೆಯಿಂದ ನಿಂತು ನಿಂತು ಅದನ್ನು ಪುನಃ ಪುನಃ ಉಚ್ಚಾರ ಮಾಡಿದನು :

**ಗ ತೇ ಮುಂ ಜೇ**
**ಯ ಶಃ ಪುಂ ಜೇ ।**
**ನಿ ರಾ ಲಂ ಬಾ**
**ಸ ರ ಸ್ವ ತೀ ॥**

## [ ೧೫ ]

ತೈಲಪನು ಮಾಳವದೇಶಕ್ಕೆ ದೂತರನ್ನು ಅಟ್ಟಿ ಮುಂಜರಾಜನ ಮರಣ ವಾರ್ತೆಯನ್ನು ಆತನ ಬಂಧುವರ್ಗದವರಿಗೆ ವಿದಿತಪಡಿಸಿದನು. ಮಹಾರಾಜನಿಗೆ ಸಲ್ಲತಕ್ಕ ಮರ್ಯಾದೆಯಿಂದ ಮುಂಜರಾಜನ ದೇಹಕ್ಕೆ ಅಂತ್ಯ ಸಂಸ್ಕಾರ ಮಾಡಿಸಿದನು. ಕ್ಷತ್ರಿಯನಿಗೆ ಉಚಿತವಾದ ರೀತಿಯಲ್ಲಿ ಆತನ ಉತ್ತರ ಕ್ರಿಯೆಗಳನ್ನು ನೆರವೇರಿಸಿದನು. ಮುಂಜರಾಜನ ಅಸ್ಥಿಗಳನ್ನು ಗಂಗಾಜಲದಲ್ಲಿ ವಿಸರ್ಜನ ಮಾಡಿಸಿದನು.

ಮುಂಜರಾಜನ ದುರಂತ ನಿಧನದ ವರ್ತಮಾನವು ವಾಯುವೇಗದಿಂದ ದೇಶದಲ್ಲಿ ಹಬ್ಬಿತು. ಆ ನಿಮಿತ್ತ ಕರ್ನಾಟಕದ ರಾಜಧಾನಿಯಲ್ಲಿ ಒಂದು

ದಿನ ಸೂತಕವನ್ನು ಆಚರಿಸಲಾಯಿತು. ವಿದ್ಯಾಪಕ್ಷಪಾತಿಯಾಗಿದ್ದ ಕರ್ನಾಟಕದ ಕೆಲವಾರು ಪಟ್ಟಣಗಳ ನಿವಾಸಿಗಳು ಮುಂಜರಾಜನ ನಿಧನವನ್ನು ಕುರಿತು ದುಃಖಪ್ರದರ್ಶನ ಮಾಡಿದರು.

ಮುಂಜರಾಜನ ಮರಣಕ್ಕಾಗಿ ಮಾಳವದ ಪ್ರಜಾಜನರು ಬಹುವಾಗಿ ಶೋಕ ಮಾಡಿದರು. ಮುಂಜರಾಜನ ಆಸ್ಥಾನಕವಿಯಾಗಿದ್ದ ಪದ್ಮಗುಪ್ತನು ಆತನನ್ನು ಕುರಿತು ಒಂದು ಕವನವನ್ನು ರಚಿಸಿ ಅದನ್ನು ತೈಲಪರಾಜನಿಗೆ ಕಳುಹಿಕೊಟ್ಟನು. ಅದರಲ್ಲಿಯ ಒಂದು ಪದ್ಯವು ಹೃದಯ ಸ್ಪರ್ಶಿಯಾಗಿದ್ದಿತು. ಅದು ಹೀಗೆ :

ಹಾ ಶೃಂಗಾರ ತರಂಗಿಣೀಕುಲಗಿರೇ
ಹಾ ರಾಜಚೂಡಾಮಣೇ !
ಹಾ ಸೌಜನ್ಯಸುಧಾನಿಧಾನ ಹಹಹಾ
ವೈದಗ್ಧ್ಯ ದುಗ್ಧೋದಧೇ ॥
ಹೇ ದೇವೋಜ್ಜಯಿನೀ ಭುಜಂಗ ಯುವತೀ-
ಪ್ರತ್ಯಕ್ಷಕಂದರ್ಪ ಹಾ !
ಹಾ ಸದ್‌ಬಾಂಧವ ಹಾ ಕಲಾಮೃತಕರ
ಕ್ವಾಸಿ ಪ್ರತೀಕ್ಷಸ್ವ ನಃ ॥

[ ಹಾ ಶೃಂಗಾರಸರಿತೆಯ ಉಗಮಸ್ಥಾನವೇ, ಹಾ ರಾಜಚೂಡಾಮಣಿಯೇ, ಹಾ ಸೌಜನ್ಯಸುಧೆಯ ಆಗರವೇ, ಹಾ ರಸಿಕತಾಕ್ಷೀರಸಾಗರವೇ, ಹೇ ಉಜ್ಜಯಿನೀ-ಪತೇ, ಹಾ ಯುವತೀ ರತಿಪ್ರಿಯನೇ, ಹಾ ಸಜ್ಜನಬಾಂಧವನೇ, ಹಾ ಕಲಾಚಂದ್ರ-ಮನೇ, ನೀನು ಎಲ್ಲಿರುವೆ ! ನಮ್ಮ ಮೇಲೆ ನಿನ್ನ ಕೃಪಾಕಟಾಕ್ಷವನ್ನು ಕರುಣಿಸು. ]

ತೈಲಪನು ಮುಂಜರಾಜನ ಈ ಸ್ಮೃತ್ಯಗೀತವನ್ನು ಒಂದು ಕಲ್ಲ ಮೇಲೆ ಕೊರೆಯಿಸಿ ಆ ಶಿಲೆಯನ್ನು ಮುಂಜರಾಜನನ್ನು ದಹನಮಾಡಿದ ಸ್ಥಳದಲ್ಲಿ ಸ್ಥಾಪಿಸಿದನು.

[ ೧೬ ]

ಮುಂಜರಾಜನ ಮರಣದೊಂದಿಗೆ ಕರ್ನಾಟಕ-ಮಾಳವಗಳಲ್ಲಿಯ ರಾಜಕೀಯ ಕಲಹದ ಒಂದು ಘಟ್ಟವು ಮುಗಿದಂತಾಯಿತು. ಜಯಶ್ರೀ

ಕರ್ನಾಟಕಕ್ಕೆ ಒಲಿದಳು. ಆದರೆ ಈ ಜಯಶ್ರೀ ನಿಜವಾಗಿ ಜಯಶ್ರೀಯಾಗಿ ಉಳಿಯುವಳೋ, ಇಲ್ಲವೆ ಒಂದು ತಾತ್ಕಾಲಿಕ ಜಯದ ಛಾಯೆಯಾಗಿ ಮಾಯವಾಗುವಳೋ, ಎಂಬ ಸಂದೇಹಗಳು ಉಂಟಾಗತೊಡಗಿದುವು.

ಮರಣವು ಮಾನವನ ದುರ್ಗುಣಗಳನ್ನು ಮುಚ್ಚುವುದು. ಅದರಲ್ಲಿಯೂ ಮೃತವ್ಯಕ್ತಿ ಪ್ರಸಿದ್ಧ ಪುರುಷನಾಗಿದ್ದರೆ, ಆತನಲ್ಲಿಯ ಸದ್ಗುಣಗಳು ಪ್ರಾಮುಖ್ಯತೆಗೆ ಬಂದು ಆತನು ಮಹಾಪುರುಷನಾಗಿ ಕಾಣತೊಡಗುವನು. ಈ ಮಾತು ಶತ್ರುರಾಜನ ಬಂಧನದಲ್ಲಿ ನಿಧನಹೊಂದಿದ ಮುಂಜರಾಜನ ವಿಷಯದಲ್ಲಿ ಸಾಕಷ್ಟು ಅನುಭವಕ್ಕೆ ಬಂದಿತು. ಇದೀಗ ಮುಂಜರಾಜನು ಹುತಾತ್ಮನೂ ಮಹಾತ್ಮನೂ ಎಂದೆನಿಸಿ, ಮಾಳವಜನಗಳಿಗೆ ಚಿರಸ್ಮರಣೀಯ ಪ್ರೀತಿ–ಗೌರವದ ವಿಷಯವಾದನು.

ಮಾಳವ ರಾಜ್ಯದಲ್ಲಿಯ ಮುಂಜರಾಜನ ಉತ್ತರಾಧಿಕಾರಿಗಳು ಆತನ ಮರಣದ ಸೇಡನ್ನು ತೀರಿಸುವ ಉದ್ಯೋಗದಲ್ಲಿ ನಿರತರಾದರು. ಕೆಲಕಾಲ ಮಂದವಾಗಿ ಉರಿಯುತ್ತಿದ್ದ ಮಾಳವ–ಕರ್ನಾಟಕಗಳಲ್ಲಿಯ ವೈರಾಗ್ನಿಗೆ ಇದೀಗ ಮುಂಜರಾಜನ ಮರಣದಿಂದ ಎಣ್ಣೆಯನ್ನು ಸುರಿದಂತಾಯಿತು. ಗೋದಾವರೀ ಸಂಗ್ರಾಮದಲ್ಲಿ ಕರ್ನಾಟಕರಿಗೆ ವಿಜಯವು ಪ್ರಾಪ್ತವಾಗಿದ್ದರೂ ಕರ್ನಾಟಕರು ಬಲಶಾಲಿಗಳಲ್ಲ, ಎಂಬುದಾಗಿ ಮಾಳವದ ಸೇನಾಧಿಕಾರಿಗಳು ಹೇಳತೊಡಗಿದರು. ಕರ್ನಾಟಕದಲ್ಲಿ ಮೊನ್ನೆ ಮೊನ್ನೆ ಒಂದು ಮನೆತನವು ಮೂಲೆಗುಂಪಾಗಿ ಇನ್ನೊಂದು ಮನೆತನದ ಆಳಿಕೆ ಪ್ರಾರಂಭವಾಗಿದೆ. ಆದುದ ರಿಂದ ಅಲ್ಲಿಯ ರಾಜಕೀಯ ಪರಿಸ್ಥಿತಿ ಇನ್ನೂ ಸುಸ್ಥಿರವಾಗಿಲ್ಲ. ಈ ಪರಿಸ್ಥಿತಿ ಯಲ್ಲಿ ಕರ್ನಾಟಕರನ್ನು ಸೋಲಿಸುವುದು ಸುಲಭ. ಈ ಮೊದಲಾದ ರಾಜ ಕೀಯ ವಿಚಾರಗಳು ಮಾಳವ ಜನಾಂಗದಲ್ಲಿ ತಲೆಯೆತ್ತಿದುವು.

ಈ ಸನ್ನಿವೇಶವನ್ನು ಲಕ್ಷಿಸಿ ತೈಲಪನ ಮನಸ್ಸು ವಿಧವಿಧದ ಆಲೋ ಚನೆಗಳಿಂದ ವಿಚಲಿತವಾಯಿತು. ಅತ್ಯಂತ ಸಾಹಸ ಪ್ರಯಾಸಗಳಿಂದ ತಾನು ಪುನಃ ಪ್ರತಿಷ್ಠೆ ಮಾಡಿದ ಚಲುಕ್ಯರ ಆಧಿಪತ್ಯವು ಮುಂದೆ ಬಹುಕಾಲ ಬಾಳುವಂತಹದಾಗುವುದೋ, ಇಲ್ಲವೆ ಗಾಳಿಗೊಡ್ಡಿದ ಸೊಡರಿನಂತೆ ಕ್ಷಣ ಜೀವಿಯಾಗಿ ಅಸ್ತಂಗತವಾಗುವುದೋ, ಎಂಬ ಚಿಂತೆ ಆತನನ್ನು ಬಹುವಾಗಿ ಬಾಧಿಸತೊಡಗಿತು.

ಈ ಚಿಂತೆಯಲ್ಲಿ ತೈಲಪನು ಕೆಲವು ದಿನಗಳನ್ನು ಕಳೆದನು. ಒಂದು ದಿನ ಬೆಳಗಿನಲ್ಲಿ ಆತನೊಂದು ಕನಸನ್ನು ಕಂಡನು. ಉನ್ನತವಾದ ಗಿರಿಯ ಒಂದು ತಪೋವನದಲ್ಲಿ ಒಬ್ಬ ತಪಸ್ವಿ ಉಗ್ರತಪಸ್ಸನ್ನು ಆಚರಿಸುತ್ತ ನಿಶ್ಚಲ ಧ್ಯಾನ ಮಗ್ನನಾಗಿ ಕುಳಿತಿದ್ದನು. ಈತನ ರೂಪವು ತನಗೆ ಸುಪರಿಚಿತವಾದುದು. ತಾನು ನೋಡುತ್ತಿರುವಂತೆ ಆ ತಪಸ್ವಿಯ ಆಕೃತಿ ಅಸ್ಪಷ್ಟವಾಗುತ್ತ ಆದರ ಸ್ಥಳದಲ್ಲಿ ತ್ರಿಶೂಲ ಡಮರುಧರನಾದ ಶ್ರೀ ಪಶುಪತಿ ಶಿವನ ತೇಜಸ್ವಿ ವಿಗ್ರಹವು ಕಾಣಿಸಿಕೊಂಡಿತು. ಅಷ್ಟರಲ್ಲಿ ತೈಲಪನು ಎಚ್ಚತ್ತನು.

ಬಳಿಕ ತೈಲಪನಿಗೆ ಮಹಾಮುನಿ ಈಶಾನಯೋಗಿಯ ನೆನಪಾಯಿತು. ಈತನು ಪಾಶುಪತ ಎಂಬ ಶೈವಪಂಥದ ಯತಿ. ಈಶಾನಯೋಗಿ ತೈಲಪನಿಗೆ ಗುರುಸ್ಥಾನದಲ್ಲಿ ಇದ್ದನು. ಚಲುಕ್ಯರಾಜ್ಯ ಪುನಃಸ್ಥಾಪನೆಯ ಪೂರ್ವದಲ್ಲಿ ತೈಲಪನು ಈಶಾನಯೋಗಿಯ ಆಶ್ರಮಕ್ಕೆ ಹೋಗಿದ್ದನು. ಈ ಆಶ್ರಮವು ಸುಮಾಲಿ ತೀರ್ಥವೆಂಬ ಪವಿತ್ರ ಸ್ಥಳದಲ್ಲಿ ಇದ್ದಿತು. ಅಂದು ಈಶಾನಯೋಗಿ ಪ್ರಸನ್ನ ಅಂತಃಕರಣದಿಂದ ತೈಲಪನನ್ನು ಹರಸಿದ್ದನು. ಈಶಾನಯೋಗಿಯ ಆ ಪವಿತ್ರ ಆಶೀರ್ವಾದಬಲದಿಂದ ತೈಲಪನು ಮುಂದೆ ಬೇಗನೆ ತನ್ನ ಆಧಿಪತ್ಯ ವನ್ನು ಸ್ಥಾಪಿಸಿದನು. ಇದೀಗ ಈ ವಿಷಮಪರಿಸ್ಥಿತಿಯಲ್ಲಿ ಆ ತನ್ನ ಗುರು ಗಳಾದ ಈಶಾನಯೋಗಿಯನ್ನು ಕಂಡು ಅವರ ಆದೇಶವನ್ನು ಪಡೆಯುವುದು ಆವಶ್ಯಕ. ಇದುವೇ ಸ್ವಪ್ನದ ಸೂಚನೆ, ಎಂದು ತೈಲಪನು ನಿಶ್ಚಯಿಸಿದನು.

ತೈಲಪನು ತನ್ನ ಸಂಕಲ್ಪವನ್ನು ಸತ್ಯಾಶ್ರಯನಿಗೆ ತಿಳಿಸಿದನು. ಸತ್ಯಾ ಶ್ರಯನು ಅದನ್ನು ಅನುಮೋದಿಸಿದನು. ಈ ಮಧ್ಯಕಾಲದಲ್ಲಿ ರಾಜ್ಯಭಾರ ವನ್ನು ಜಾಕರೂಕತೆಯಿಂದ ನಡೆಯಿಸಿಕೊಂಡು ಹೋಗುವ ಹೊಣೆಯನ್ನು ಸತ್ಯಾಶ್ರಯನು ವಹಿಸಿಕೊಂಡನು.

ಈಶಾನಯೋಗಿಯು ಮಹಾಮುನಿ, ಯೋಗಿರಾಜ ಎಂದು ಪ್ರಸಿದ್ಧಿ ಯನ್ನು ಪಡೆದಿದ್ದನು. ಈಶಾನಯೋಗಿಯ ಆಶ್ರಮವು ಸುಮಾಲಿ ತೀರ್ಥ ಎಂಬ ಗುಡ್ಡಗಾಡು ಸ್ಥಳದಲ್ಲಿದ್ದು, ಈ ಗುಡ್ಡವು ರಾಜಧಾನಿಯಿಂದ ದೂರ ದಲ್ಲಿದ್ದಿತು. ಈ ಗುಡ್ಡದಲ್ಲಿ ಒಂದು ಶ್ರೀ ಪಶುಪತಿ ಶಿವನ ಮಂದಿರವು; ಅದರ ಸುತ್ತಲು ವಿಸ್ತಾರವಾದ ತಪೋವನವು ಇದ್ದಿತು. ವಿಶ್ವಾಸಿಕರಾದ ಕೆಲ

ಜನರನ್ನು ಮಾತ್ರ ಕರೆದುಕೊಂಡು ಈಶಾನಯೋಗಿಯ ಈ ಆಶ್ರಮಕ್ಕೆ ಹೋಗಬೇಕೆಂದು ತೈಲಪನು ಸಿದ್ಧತೆಯನ್ನು ಮಾಡಿದನು.

[ ೧೬ ]

" ಭಜ ಗೌರೀಶಂ ಭಜ ಗೌರೀಶಂ ।
ಭಜ ಗೌರೀಶಂ ಸಾಧುಮತೇ ॥ "

" ಓಂ ನಮಃ ಶ್ರೀ ಪಾರ್ವತೀಪತೇ, ಹರಹರ ಮಹಾದೇವ ! "

" ಏ ಕಾಲಲೋಚನಾ ! ಗಂಟಲು ಹರಿಯುವಂತೆ ಹಾಗೇಕೆ ಕಿರಿ ಚುತ್ತೀಯೋ ? "

" ಏ ನೀಲಲೋಹಿತಾ ! ಹಾಗೆ ಅನ್ನಕೂಡದಪ್ಪಾ. ಇಂದು ಮಹಾ ಶಿವರಾತ್ರಿ. ಹರಹರ ಮಹಾದೇವ ಎಂದು ಶಿವನಾಮಗರ್ಜನೆ ಮಾಡಬೇಕು. "

" ಕಾಲಲೋಚನಾ, ಮಹಾಶಿವಭಕ್ತನಪ್ಪಾ ನೀನು ! ಕೇವಲ ನಂದೀ ಗೊಂಡಿಯ ಅವತಾರ ! "

" ಶಾಂತಂ ಪಾಪಂ, ನೀಲಲೋಹಿತಾ ! ನೀನು ಇನ್ನೂ ಹೊಸಬ. ನಿನಗೆ ಈ ತಪೋವನದ ಮಹಿಮೆ ಗೊತ್ತಿಲ್ಲ. ದೈವಿಕ ವಿಷಯಗಳಲ್ಲಿ ಹೀಗೆ ಚೇಷ್ಟೆ ಮಾಡಬಾರದು. "

ಈ ಸಂಭಾಷಣೆ ನೀಲಲೋಹಿತ ಮತ್ತು ಕಾಲಲೋಚನ ಇವರ ನಡುವೆ ನಡೆಯಿತು. ಇವರು ಸುಮಾಲಿತೀರ್ಥದ ಈಶಾನಯೋಗಿಯ ಆಶ್ರಮದ ಬ್ರಹ್ಮಚಾರಿಗಳು. ನೀಲಲೋಹಿತನು ಈ ಆಶ್ರಮಕ್ಕೆ ಬಂದು ಸ್ವಲ್ಪ ದಿನಗಳು ಆಗಿವೆ. ಆತನ ವಯಸ್ಸು ಇನ್ನೂ ಎಳದು. ಕಾಲಲೋಚನನು ಪ್ರಬುದ್ಧನು. ಇವರು ಮಹಾಶಿವರಾತ್ರಿಯ ನಿಮಿತ್ತ ಬೆಳಗಿನಲ್ಲಿ ಬೇಗ ಸ್ನಾನ ಮಾಡಿ, ಶಿವಪೂಜೆಗೆಂದು ಬಿಲ್ವಪತ್ರವನ್ನು ಹರಿಯಲು ಬಿಲ್ವವೃಕ್ಷದ ಎರಡು ಟೊಂಗೆ ಗಳ ಮೇಲೆ ಏರಿದ್ದರು. ಬಿಲ್ವಪತ್ರವನ್ನು ಹರಿಯುತ್ತಿರುವಾಗ ಅವರ ಮಾತುಗಳು ಮುಂದುವರಿದುವು:

" ಏ ಕಾಲಲೋಚನಾ ! ಇಂದು ಚಲುಕ್ಯ ಚಕ್ರೇಶ್ವರನು ಈ ಆಶ್ರಮಕ್ಕೆ ಬರುವನಂತೆ; ನಿಜವೇ ? " ನೀಲಲೋಹಿತನು ಕೇಳಿದನು.

“ ನಿನಗೆ ಯಾರು ಹೇಳಿದರು ? ಚಲುಕ್ಯ ಚಕ್ರೇಶ್ವರರೆಂದರೆ ತ್ರೈಲಪ ಮಹಾರಾಜರು ! ” ಕಾಲಲೋಚನನು ಆಶ್ಚರ್ಯದಿಂದ ಉಸುರಿದನು.

“ ಯಾರೇಕೆ ಹೇಳಬೇಕು ? ನಾನೇ ಬಂಡೆಯ ಮರೆಯಲ್ಲಿ ನಿಂತು ಕೇಳಿದೆನು. ಆ ಹೋತಿನ ಗಡ್ಡಪ್ಪನು ಹೀಗೆ ಯಾರ ಜೊತೆಗೋ ಮಾತನಾಡು ತ್ತಿದ್ದನು. ಎಷ್ಟು ಉದ್ದವಪ್ಪಾ ಆತನ ಗಡ್ಡ ! ಒಂದು ಮೊಳವಾಗಬಹುದು! ”

“ ಏ ನೀಲಲೋಹಿತಾ, ಜೋಕೆ ! ಹಾಗೆ, ಹೇಳಕೂಡದು. ಆತನನ್ನು ಭೈರವ ಬ್ರಹ್ಮಚಾರಿಯೆಂದು ಹೇಳು. ಭೈರವ ಬ್ರಹ್ಮಚಾರಿಯೆಂದರೆ ಸಾಮಾನ್ಯನಲ್ಲ, ಮಹಾಸಾಧಕ. ”

“ ಆತನ ಸಾಧನೆಯೆಲ್ಲ ನನಗೆ ಗೊತ್ತಿದೆ ಬಿಡು. ಬೆಳಗಿನಲ್ಲಿ ಎದ್ದು ತಲೆ ಕೆಳಗಾಗಿ ನಿಲ್ಲುವನು. ಒಂದು ಮಗಿ ನೀರನ್ನು ಹನಿಸುವನು. ಹತ್ತೊಂಬತ್ತು ಮೊಳದ ಮುಂಡಾಸವನ್ನು ನುಂಗುವನು. ಮೂಗಿನ ಹೊಳ್ಳೆಯನ್ನು ಹಿಗ್ಗಿಸಿ ಸರ್ಪದಂತೆ ಬುಸುಗುಟ್ಟುವನು. ಉಸುರು ಎಳೆಯುವನು; ಬಿಡುವನು; ಎಳೆಯುವನು, ಬಿಡುವನು. ಆ ಮೇಲೆ ಉಸಿರನ್ನು ಕಟ್ಟಿ ಹೊಟ್ಟೆಯನ್ನು ಉಬ್ಬಿಸುವನು. ಇದೇ ಆತನ ಸಾಧನೆ. ”

“ ನೀಲಲೋಹಿತಾ ! ಅಲ್ಲವಪ್ಪಾ ಅದು. ಅದಕ್ಕೆಲ್ಲಾ ಶೀರ್ಷಾಸನ, ಉಷಃಪಾನ, ನವಲಿ, ಭಸ್ತ್ರಿಕಾ, ಪ್ರಾಣಾಯಾಮ ಎಂದೆನ್ನುವರು. ಇವು ಯೋಗಮಾಡುವವರಿಗೆ ಅವಶ್ಯಕ. ”

“ ಅದೇನೋ ನನಗೆ ತಿಳಿಯದು. ಏ ಕಾಲಲೋಚನಾ ! ಆ ಹೋತಿನ ಗಡ್ಡಪ್ಪ ( ಕಪಾಳಕ್ಕೆ ಹೊಡೆದುಕೊಂಡು ) ಅಲ್ಲ–ಅಲ್ಲ, ಥೂ–ಭೈರವ ಬ್ರಹ್ಮಚಾರಿ ನೆಲಬಿಟ್ಟು ಒಂದು ಮೊಳ ಮೇಲಕ್ಕೆ ಏಳುತ್ತಾನಂತೆ ಅಂತರಾಳ ದಲ್ಲಿ; ನಿಜವೇ ? ”

“ ನಿಜ, ನೀಲಲೋಹಿತಾ ! ನಾನೂ ಹಾಗೆ ಹೇಳಿದ್ದನ್ನು ಕೇಳಿದ್ದೇನೆ. ಆದರೆ ಈ ಕಣ್ಣಿನಿಂದ ನೋಡಿಲ್ಲ. ”

“ ಅದಿರಲಿ; ಕಾಲಲೋಚನಾ ! ಆ ಚಲುಕ್ಯ ಚಕ್ರೇಶ್ವರನು ಇಲ್ಲಿಗೆ ಏತಕ್ಕೆ ಬರುವನೋ ಮಹಾರಾಯ ! ಇಲ್ಲೇನು ಎಲ್ಲರೂ ಲಂಗೋಟಿ ಗೆಣೆಯರು; ಬೂದಿಗುಂಬಳಕಾಯಿಗಳು. ”

" ನೀಲಲೋಹಿತಾ, ಕೇಳು ! ಈ ತಪೋವನದ ಪ್ರಭಾವವು ಎಲ್ಲರನ್ನು ಇಲ್ಲಿಗೆ ಎಳೆದು ತರುತ್ತದೆ. ಈ ತಪೋವನದ ಸುತ್ತಲು ಮರಗಳಲ್ಲಿ ಕುಳಿತು ಕೊಂಡು ಕೋಗಿಲಗಳು ಹಗಲಿರುಳು ಕೂಗುತ್ತಿರುತ್ತವೆ. ಅವು ಏನೆಂದು ಕೂಗುತ್ತವೆ ? "

" ಕಾಲಲೋಚನಾ, ಕೂಗುತ್ತಿರುವುದನ್ನು ಕೇಳಿದ್ದೇನೆ. ಅವುಗಳ ಭಾಷೆ ನನಗೆ ತಿಳಿಯದು. ಏನೆಂದು ಕೂಗುತ್ತವೆ ? ಹೊಟ್ಟೆಗಿಲ್ಲ, ಹೊಟ್ಟೆಗಿಲ್ಲ, ಹೊಟ್ಟೆಗಿಲ್ಲ, ಎಂದು ಕೂಗುತ್ತಿರಬಹುದು. "

" ಅಲ್ಲ, ಅಲ್ಲ, ನೀಲಲೋಹಿತಾ ! ಪುಗಿಲ್ ಪುಗಿಲ್ ಎಂದು ಕೂಗುತ್ತವೆ. ಪುಗಿಲ್ ಎಂದರೆ 'ಬರಬೇಡ.' ಈ ತಪೋವನಕ್ಕೆ ಬರಬೇಡಿರಿ ಬರಬೇಡಿರಿ, ಎಂದು ಅವು ಎಚ್ಚರ ಕೊಡುತ್ತಿರುವುವು. "

"ಕಾಲಲೋಚನಾ! ಯಾರು ಬರಬಾರದು ಇಲ್ಲಿಗೆ? ಬುದ್ಧಿಯಿದ್ದವರೇ?"

" ಬುದ್ಧಿಗೇಡಿಯೇ ! ಹಾಗಲ್ಲ. "

" ಕಾಲಲೋಚನಾ ! ಇದೀಗ ನೀನು, ಎಲ್ಲರೂ ಇಲ್ಲಿಗೆ ಬರುತ್ತಾರೆ ಎಂದು ಹೇಳಿದೆಯಲ್ಲ ! ಅಂದಬಳಿಕ ಬರಬಾರದವರು ಯಾರು ? "

"ನೀಲಲೋಹಿತಾ ! ತಿಳಿದುಕೋ. ಪಾಪಿಷ್ಠರು, ಕೋಪಿಷ್ಠರು, ಅಧರ್ಮಿಷ್ಠರು ಇಲ್ಲಿಗೆ ಬರಕೂಡದು. "

" ಅಂತೂ ಇಬ್ಬರು ಪಿಷ್ಠರು ಮತ್ತು ಒಬ್ಬರು ಮಿಷ್ಠರು ಇಲ್ಲಿಗೆ ಬರಬಾರದಂತಾಯಿತು. ಮತ್ತೆ ? "

" ನೀಲಲೋಹಿತಾ, ನಿನ್ನ ಮಿದುಳು ಜೇನಹುಟ್ಟಾಗಿದ್ದಂತೆ ತೋರುತ್ತದೆ. ಇರಲಿ. ಇಲ್ಲಿಯ ಮಂಗಗಳು ಪಶುಪತಿಲಿಂಗದ ಅಭಿಷೇಕಕ್ಕಾಗಿ ಕೊಳದಿಂದ ನೀರನ್ನು ತಂದುಕೊಡುವುವು. ನೋಡಿರುವೆಯಾ ? "

" ನೋಡಿರುವೆ. ಅದರ ಜೊತೆಗೆ ಅವುಗಳ ಮಂಗತನದ ಮೂಲಕ ಮಡಿಕೆಗಳು ಕೈಜಾರಿ ಬಿದ್ದು ಪುಡಿಪುಡಿಯಾಗುವುದನ್ನೂ ಕಂಡಿದ್ದೇನೆ. "

" ಮತ್ತೆ ಅದೇ ವಕ್ರಗತಿ ! ಇಲ್ಲಿಯ ಅರಗಿಳಿಗಳು ನಿನ್ನಂತಹ ಮರಗೂಳಿಗಳು ಮಂತ್ರಪಾಠವನ್ನು ಹೇಳುವಾಗ ತಪ್ಪಿದರೆ ಆ ತಪ್ಪನ್ನು ತಿದ್ದಿ ಸರಿಯಾದ ಪಾಠವನ್ನು ಹೇಳಿಕೊಡುವುವು; ಕಂಡಿರುವೆಯಾ ? "

" ಕಂಡಿದ್ದೇನೆ, ಕಾಲಲೋಚನಾ ! ಮಾತ್ರವಲ್ಲ, ಅನುಭವಿಸಿದ್ದೇನೆ. ಮೊನ್ನೆ ಬೆಳಗಿನಲ್ಲಿ ಹೀಗೆಯೇ ಒಂದು ಅರಗಿಳಿ ಬಂದು ನನ್ನ ಕಿವಿಯನ್ನೇ ಹಿಂಡಿತು. ಆ ನೋವು ಇನ್ನೂ ಹೋಗಿಲ್ಲ ! "

" ಹೀಗೆಯೇ ಆಗಬೇಕು ನಿನಗೆ. ನೀಲಲೋಹಿತಾ ! ಮಹಾಮುನಿಗಳು ಧರ್ಮೋಪದೇಶ ಮಾಡುವಾಗ ಹುಲಿಗಳು ಬಂದು ಅದನ್ನು ಕೇಳುವುವು, ಗೊತ್ತೇ ? "

" ಗೊತ್ತಿಲ್ಲ, ನೋಡು. ಹುಲಿಗಳು ಧರ್ಮಶ್ರವಣ ಮಾಡಲಿಕ್ಕೆ ಬರುವವೋ ? ಇಲ್ಲವೆ ತಂಪಾದ ಗವಿಗಳಲ್ಲಿ ಮಲಗಿಕೊಂಡು ಗೊರಕೆ ಹೊಡೆಯಲಿಕ್ಕೆ ಬರುವವೋ ? "

" ನೀಲಲೋಹಿತಾ ! ಬಿಡು ಬಿಡು ನಿನ್ನ ಕುಹಕಮತಿಯನ್ನು. ಈ ತಪೋವನದ ಮಹಿಮೆ ಹೀಗಿರುವಾಗ ರಾಜರು ಮಹಾರಾಜರು ಇಲ್ಲಿಗೆ ಬಂದು ಮಹಾಮುನಿಗಳ ಅನುಗ್ರಹವನ್ನು ಬಯಸಿದರೆ ಅಚ್ಚರಿಯಲ್ಲ. "

"ಕಾಲಲೋಚನಾ ! ಇದೀಗ ನನಗೆ ತಿಳಿಯಿತು; ತಿಳಿಯಿತಪ್ಪಾ ತಿಳಿಯಿತು ಈ ತಪೋವನದ ಮಹಿಮೆ. ಇದು ಬಹು ವಿಚಿತ್ರವಾಗಿದೆ. "

" ನೀಲಲೋಹಿತಾ ! ಇನ್ನು ಈ ಹುಚ್ಚು ಹರಟೆ ಸಾಕು. ಮುಂದಿನ ಕಾರ್ಯಕ್ರಮಕ್ಕಾಗಿ ನಾವು ಶ್ರೀಪಶುಪತಿ ಮಂದಿರದಲ್ಲಿ ಉಪಸ್ಥಿತರಾಗಬೇಕಾಗಿದೆ. "

ಅನಂತರ ಆ ಇಬ್ಬರೂ ಬಟುಗಳು, ನೀಲಲೋಹಿತ ಕಾಲಲೋಚನರು ಬಿಲ್ವಸಂಚಯವನ್ನು ಮುಗಿಸಿ ಮರದ ಕೆಳಗೆ ಇಳಿದರು.

## [ ೧೮ ]

ಮಹಾಶಿವರಾತ್ರಿಯ ಅಪರಾಹ್ಣದಲ್ಲಿ ತೈಲಪನು ಪರಿಮಿತ ಪರಿವಾರ ಸಮೇತನಾಗಿ ಸುಮಾಲಿತೀರ್ಥಕ್ಕೆ ಆಗಮಿಸಿದನು. ಅಲ್ಲಿಯ ಪವಿತ್ರ ವಾತಾವರಣದಿಂದ ಆತನ ಮನಸ್ಸಿಗೆ ನೆಮ್ಮದಿ ಉಂಟಾಯಿತು. ಆ ಮಹಾ ಪುಣ್ಯದಿನದ ನಿಮಿತ್ತ ಈಶಾನಯೋಗಿಗಳ ಅಧಿಷ್ಠಾನದಲ್ಲಿ ಶ್ರೀಪಶುಪತಿ ಶಿವಮಂದಿರದಲ್ಲಿ ಶಿವರಾತ್ರಿಯ ಮಹೋತ್ಸವವು ನೆರವೇರಿತು. ಶಿವಪೂಜೆ,

ಶಿವಮಂತ್ರಜಪ, ಶಿವಸ್ತೋತ್ರ, ಶಿವಸಂಕೀರ್ತನ, ಶಿವಪುರಾಣ ಪ್ರವಚನ, ಶಿವನಾಮ ಗರ್ಜನೆ, ಮೊದಲಾದ ಕಾರ್ಯಕ್ರಮಗಳು ಅಂದಿನ ದಿನ ಉದ್ದಕ್ಕೂ ನಡೆದುವು.

ಮರುದಿನ ಬೆಳಗಿನಲ್ಲಿ ಪಾರಣೆ ಸಾಂಗವಾಯಿತು. ಆ ಬಳಿಕ ಈಶಾನ ಯೋಗಿಗಳು ತೈಲಪನನ್ನು ತಮ್ಮ ವಾಸದ ಗುಹೆಗೆ ಕರೆಯಿಸಿದರು. ಸ್ವಲ್ಪ ಎತ್ತರದ ಕಲ್ಲುಬಂಡೆಯ ಮೇಲೆ ವ್ಯಾಘ್ರಾಸನವನ್ನು ಹಾಸಿದ್ದಿತು. ಅದರ ಮೇಲೆ ಜಟಾಧಾರಿಯಾದ ಈಶಾನಯೋಗಿ ಕುಳಿತಿದ್ದರು. ಭಸ್ಮಪೂರಿತವಾದ ಅವರ ಶರೀರಯಷ್ಟಿ ಕೃಶವಾದರೂ ತೇಜಃಪುಂಜವಾಗಿದ್ದಿತು. ಅವರ ಕಣ್ಣುಗಳು ನಕ್ಷತ್ರದಂತೆ ಕಾಂತಿಯುತವಾಗಿದ್ದುವು. ಕೌಪೀನವನ್ನು ಬಿಟ್ಟರೆ ಬೇರಾವ ಆವರಣವೂ ಅವರಿಗಿರಲಿಲ್ಲ.

ತೈಲಪನು ಮಹಾಮುನಿಗೆ ಸಾಷ್ಟಾಂಗ ಪ್ರಣಾಮಮಾಡಿ ವಿನಮ್ರನಾಗಿ ಕುಳಿತುಕೊಂಡನು. ಮಹಾಮುನಿಗಳು ಮೆಲ್ಲನೆ ಮಾತನ್ನು ಪ್ರಾರಂಭಿಸಿದರು:

" ಪರಮಭಟ್ಟಾರಕ, ನಿನ್ನ ರಾಜ್ಯದಲ್ಲಿ ಎಲ್ಲವೂ ಸೌಖ್ಯವಷ್ಟೇ ? "

" ಯೋಗಿರಾಜ, ತಮ್ಮ ಅನುಗ್ರಹದಿಂದ ಹಾಗೆ ಹೇಳಬಹುದು. ಆದರೆ ಮಾಳವ ಮಂಡಲದ ಅವಾಂತರಗಳು ನನ್ನನ್ನು ಬಹುವಾಗಿ ಬಾಧಿಸುತ್ತಿವೆ. "

" ಅದು ಹೇಗೆ, ಪರಮಭಟ್ಟಾರಕ ? "

" ವಾಕ್ಪತಿ ಮುಂಜರಾಜನು ನನ್ನ ಕಾರಾಗೃಹದಲ್ಲಿ ಮೃತನಾದನು. ಅದೊಂದು ದೊಡ್ಡ ಮನಸ್ತಾಪವು ನನಗೆ. ಇದರಿಂದ ಮಾಳವ–ಕರ್ನಾಟಕಗಳ ಮಧ್ಯದ ದ್ವೇಷಾಗ್ನಿ ಪ್ರಜ್ವಲಿಸುವ ಲಕ್ಷಣಗಳು ಗೋಚರಿಸುತ್ತಿವೆ. "

" ಪರಮಭಟ್ಟಾರಕ ! ರಾಜನೀತಿಯ ಮಾರ್ಗವು ರಜೋಗುಣದಿಂದ ಕೂಡಿದುದು. ಇದು ಯಾವಾಗಲೂ ವಿಷಮ ವಿಷಮವಾಗಿ ಮುಂದುವರಿಯುತ್ತದೆ. "

" ಯೋಗಿರಾಜ ! ಮುಂಜರಾಜನು ಸಾಮಾನ್ಯ ರಾಜನಾಗಿರಲಿಲ್ಲ. ಆತನು ವಿದ್ವಾಂಸರಲ್ಲಿ ಗಣ್ಯನಾಗಿದ್ದನು. ಉತ್ತಮ ಕವಿಯೆಂದು ಕೀರ್ತಿಯನ್ನು ಗಳಿಸಿದ್ದನು. ಕಲಾರಸಿಕನೆಂದು ಅನೇಕರು ಆತನನ್ನು ಕೊಂಡಾಡುತ್ತಿದ್ದರು.

ಇಂತಹ ಪ್ರಖ್ಯಾತ ಪುರುಷನ ಮರಣಕ್ಕೆ ಕಾರಣನಾದೆನೆಂದು ಬಹು ಜನರು ನನ್ನನ್ನು ದೂರುತ್ತಿರುವರು. ”

“ ಪರಮಭಟ್ಟಾರಕ ! ಮುಂಜರಾಜನಲ್ಲಿ ಗುಣಗಳು ಹಲವಿದ್ದರೂ, ಅವಗುಣಗಳು ಘೋರ ಸ್ವರೂಪದುವಾಗಿದ್ದುವು. ಇದುವೇ ಆತನ ದುರಂತದ ಕಾರಣವೆಂದು ಬಲ್ಲವರು ಕಾಣುವರು. ಆತನು ತನ್ನ ಪ್ರತಿಭೆಯನ್ನು ಹೆಚ್ಚಾಗಿ ಕ್ಷಣಿಕ ಮತ್ತು ವೈಷಯಿಕ ವ್ಯಾಪಾರಗಳಲ್ಲಿ ವ್ಯಯಮಾಡಿದನು. ”

“ ಯೋಗಿರಾಜ ! ಆತನ ಕಾವ್ಯದಲ್ಲಿಯೂ ಕಲೆಯ ಸ್ವಾರಸ್ಯವನ್ನು ಕಂಡು ಅನೇಕರು ಮುಗ್ಧರಾಗಿರುವರಲ್ಲವೇ ? ”

“ ಪರಮಭಟ್ಟಾರಕ ! ಅದು ಲೌಕಿಕ ಕಾವ್ಯವು. ಅದರಲ್ಲಿ ಅಮರ ಕಲೆಯ ಆತ್ಮವಿಕಾಸದ ಪ್ರಕಾಶವಿಲ್ಲ. ಒಮ್ಮೆ ಸವಿದ ಬಳಿಕ ಕ್ಷಣಿಕ ಆನಂದವಿತ್ತು ಅಲ್ಲಿಗೆ ಮುಗಿದು ಬಿಡುವಂತಹದು ಲೌಕಿಕ ಕಲೆ. ಇದು ಸಾಮಾನ್ಯ ಕಲೆ, ಶ್ರೇಷ್ಠ ಕಲೆಯಲ್ಲ. ಹೃದಯವನ್ನು ಕ್ಷಣಿಕದ ಆಚೆಗೆ ಮೇಲಕ್ಕೆತ್ತಿ ಚಿರಕಾಲಿಕ ಆನಂದ ಮತ್ತು ಉಲ್ಲಾಸವನ್ನು ನೀಡುವಂತಹ ಕಲೆ ಉತ್ತಮ ಕಲೆ. ”

“ ಇದು ವಾಸ್ತವವು, ಯೋಗಿರಾಜ. ಆದಕ್ಕಾಗಿ ನಮ್ಮಲ್ಲಿ ಕೇವಲ ಲೌಕಿಕ ಶೃಂಗಾರ ಭೋಗ ವಿಲಾಸಗಳಿಗೆ ಗೌಣ ಸ್ಥಾನವು ದೊರೆತಿದ್ದು, ಧಾರ್ಮಿಕ ಸತ್ಕಾರ್ಯಗಳಿಗೆ ಪ್ರಾಧಾನ್ಯವು ಉಂಟಾಗಿದೆ. ನಮ್ಮ ಕಾವ್ಯ ಮತ್ತು ಕಲೆಗಳು ಧಾರ್ಮಿಕ ಆವರಣದಲ್ಲಿ ಬೆಳೆದು ಬಂದಿವೆ. ”

“ ಪರಮಭಟ್ಟಾರಕ ! ಈ ತತ್ವವು ನಿಮ್ಮ ಮನೆತನದಲ್ಲಿ ಒಂದು ಹೆಚ್ಚಿನ ಅನುಷ್ಠಾನದ ವಿಷಯವಾಗಿದೆ. ನಿನ್ನ ಪೂರ್ವಜರಾದ ಚಲುಕ್ಯರು ಶಿಲ್ಪ, ಸಂಗೀತ ಮೊದಲಾದ ಕಲೆಗಳನ್ನು ಇದೇ ಧಾರ್ಮಿಕ ಮತ್ತು ಉದಾತ್ತ ದೃಷ್ಟಿಯಿಂದ ಪೋಷಿಸಿದರು. ಆದುದರಿಂದ ಅವು ಇದುವರೆಗೆ ಶ್ರೇಷ್ಠ ಕಲಾ ಕೃತಿಗಳಾಗಿ ನಿಂತಿವೆ. ಮುಂದೆಯೂ ಬಹುಕಾಲ ನಿಲ್ಲುವವು. ”

“ ಯೋಗಿರಾಜ, ವಾತಾಪಿಯ ಗುಹಾಶಿಲ್ಪವು ಕರ್ನಾಟಕದ ಶಿಲ್ಪ ಕಲೆಯ ಉಚ್ಚ ಆದರ್ಶವಾಗಿದೆ. ವಾತಾಪಿಯ ಗಣಪತಿ ಕರ್ನಾಟಕ

ಸಂಗೀತದ ಅಧಿದೇವತೆಯಾಗಿ ದಕ್ಷಿಣ ಭಾರತದಲ್ಲಿ ತನ್ನ ವರ್ಚಸ್ಸನ್ನು ಬೀರುತ್ತಿದ್ದಾನೆ. ಮಹಾನುಭಾವರಾದ ತಮಗೆ ಈ ವಿಷಯಗಳು ಹೊಸವಲ್ಲ.”

“ಅಹುದು, ಪರಮಭಟ್ಟಾರಕ. ಅದಕ್ಕಾಗಿಯೇ ನನಗೆ ನಿನ್ನ ಮನೆತನದ ಮೇಲೆ ಅಭಿಮಾನವಿದೆ. ಕರ್ನಾಟಕದ ಅನೇಕ ಪ್ರತಿಭಾವಂತರು ತಮ್ಮ ಕಾವ್ಯಾದಿ ಕೃತಿಗಳಿಂದ ಸಂಸ್ಕೃತ ಸಾರಸ್ವತವನ್ನು ಸಮೃದ್ಧಗೊಳಿಸಿದ್ದಾರೆ. ಆದರೆ ತನ್ನ ಶಿಲ್ಪಕಲಾಪ್ರತಿಭೆಯಿಂದ ಕರ್ನಾಟಕವು ಭಾರತಕ್ಕೆ ನೀಡಿದ ಕಾಣಿಕೆ ಅಸಾಧಾರಣವಾಗಿದೆ. ಇದರ ಶ್ರೇಯಸ್ಸು ನಿನ್ನ ಮನೆತನದ ಅರಸರಿಗೆ ಬಹುವಾಗಿ ಸಲ್ಲುತ್ತದೆ. ಶಿಲೆಯಲ್ಲಿಯ ಈ ಕಾವ್ಯಕಲೆ ಸಚೇತನವಾಗಿದೆ; ಉದಾತ್ತ ಕಲೆಯಾಗಿದೆ; ಅಮರಕಲೆಯಾಗಿದೆ. ಇದೇಮೇರೆಗೆ ನೀನು ಮತ್ತು ನಿನ್ನ ವಂಶಿಕರು ಇಂತಹ ಉನ್ನತ ಕಲಾಕೃತಿಗಳನ್ನು ಹೆಚ್ಚಾಗಿ ನಿರ್ಮಾಣಮಾಡಿ ಚಿರಂತನ ಶ್ರೇಯೋಭಾಗಿಗಳಾಗುವ ದೃಶ್ಯವು ನನ್ನ ಮನಶ್ಚಕ್ಷುವಿನ ಮುಂದೆ ಸುಳಿಯುತ್ತಲಿದೆ. ಇಂತಹ ಕಲೆ ನಿನ್ನ ಮನೆತನದ ಮೂಲಕ ‘ಚಲುಕ್ಯಶಿಲ್ಪ’ ಎಂದು ಪ್ರಸಿದ್ಧಿಯನ್ನು ಪಡೆಯುವುದು.”

“ಯೋಗಿರಾಜ! ವಾತಾಪಿಯ ಆ ಗುಹಾಶಿಲ್ಪದಲ್ಲಿಯ ಒಂದು ಮಹಾ ವಿಗ್ರಹವು ಮಹಾವರಾಹ. ಈತನೇ ನನ್ನ ಇಷ್ಟದೈವತ ಎಂಬ ವಿಷಯವನ್ನು ತಮಗೆ ಬೇರೆಯಾಗಿ ಅರಿಕೆಮಾಡುವ ಅಗತ್ಯವಿಲ್ಲ.”

“ಅಹುದು, ಪರಮಭಟ್ಟಾರಕ! ಮಹಾವರಾಹನು ಚಲುಕ್ಯರ ಕುಲದೈವತ, ಇಷ್ಟದೈವತ. ಅದೊಂದು ಸಂಕೇತ. ಮಹಾಸಾಗರದಲ್ಲಿ ಮುಳುಗಿದ ಭೂಮಿಯನ್ನು ಮೇಲಕ್ಕೆ ಎತ್ತಿ ನಿಲ್ಲಿಸಿದ ಆ ಮಹಾವಿಷ್ಣು, ಅರಾಜಕದ ಬಿರುಗಾಳಿಯಿಂದ ಮತ್ತು ಅಶಾಂತಿಯ ಕಲ್ಲೋಲದಿಂದ ಪ್ರಜಾಜನರನ್ನು ಕಾಯ್ದು ಕಾಪಾಡುವ ಜನನಾಥರಿಗೆ ದಿವ್ಯವಾದ ಒಂದು ಆದರ್ಶ.”

“ಆದರೆ ಯೋಗಿರಾಜ! ರಾಜಕೀಯ ರಂಗದಲ್ಲಿ ಶಾಂತಿಗಿಂತ ಅಶಾಂತಿಯ ಹೊಯ್ದಾಟವೇ ಅಧಿಕ, ಎಂಬ ಸತ್ಯವು ಈ ಜೀವನದಲ್ಲಿ ನನಗೆ ಹೆಚ್ಚು ಕಟುತರವಾಗಿ ಅನುಭವಕ್ಕೆ ಬರುತ್ತಲಿದೆ.”

“ಅಹುದು, ಪರಮಭಟ್ಟಾರಕ; ಸಂದೇಹವಿಲ್ಲ. ರಾಜಕಾರಣದ ಲೌಕಿಕದಲ್ಲಿ ಆಧ್ಯಾತ್ಮದಲ್ಲಿಯ ಅಲೌಕಿಕ ಶಾಂತಿ ದೊರೆಯುವುದು ಸದಾ

ದುಸ್ತರ. ರಾಜಸೀ ವೃತ್ತಿಯ ರಾಜಕಾರಣವು ಹಿಂಸಾಮಯವಾದುದು. ಅನೇಕ ದೋಷಗಳಿಂದ ಕೂಡಿದ್ದರೂ ನ್ಯಾಯವಾಗಿ ನಡೆದರೆ ಬಹು ಜನರ ಹಿತವನ್ನು ಸಾಧಿಸುವ ಸಾಧನವು ಮಾತ್ರ ಅದಾಗಿದೆ ಎಂಬ ಒಂದು ಉತ್ತಮಾಂಶವು ರಾಜ್ಯತಂತ್ರದಲ್ಲಿ ಅಳವಟ್ಟಿದೆ. ಅದಕ್ಕಾಗಿ ಕ್ಷತ್ರಿಯರಾದವರು ರಾಜಕೀಯ ವೃತ್ತಿಯಿಂದ ರಾಜ್ಯಪರಿಪಾಲನೆಯನ್ನು ಮಾಡಲೇಬೇಕು."

"ಯೋಗಿರಾಜ! ಇದುವರೆಗಿನ ತಮ್ಮ ಸಮಾಗಮದಿಂದ ನನ್ನ ಮನಸ್ಸಿನಲ್ಲಿ ಶಾಂತಿ ನೆಲೆಗೊಳ್ಳುತ್ತಲಿದೆ. ನನ್ನ ಮತ್ತು ನನ್ನ ಮನೆತನದ ಭವಿತವ್ಯದ ಬಗೆಗೆ ನನ್ನಲ್ಲಿ ಮೂಡಿದ್ದ ನಿರಾಶಾಜನಕ ವಿಚಾರಗಳು ಹಿಂದುಳಿಯುತ್ತಿವೆ. ತಾವು ಈ ಹಿಂದೆ ಕರುಣಿಸಿದಂತೆ, ತಮ್ಮ ಕೃಪಾದೃಷ್ಟಿಯನ್ನು ಬೀರಿ ನನ್ನ ಜೀವನವು ಜಯಶೀಲವಾಗುವಂತೆ ಆಶೀರ್ವದಿಸಬೇಕಾಗಿ ಪ್ರಾರ್ಥಿಸುತ್ತೇನೆ."

"ಪರಮಭಟ್ಟಾರಕ, ಚಿಂತಿಸದಿರು. ಮಾಳವ ರಾಜಕಾರಣದ ಈ ತೊಡಕು, ಮಾಳವ ರಾಜ್ಯತಂತ್ರದ ಈ ಕಶ್ಮಲವು ಪೂರ್ತಿಯಾಗಿ ತೊಡೆದು ಹೋಗದೆ ಇದ್ದರೂ ಅದರಿಂದ ನಿನಗೂ ನಿನ್ನ ವಂಶದವರಿಗೂ ಗಂಡಾಂತರವಿಲ್ಲ. ಕರ್ನಾಟಕದ ಮೇಲೆ ಶ್ರೀ ಪಶುಪತಿಯ ಕೃಪಾಕಟಾಕ್ಷವಿದೆ. ಚಲುಕ್ಯವಂಶಿಕರ ಮೇಲೆ ಶ್ರೀ ಮಹಾವರಾಹನ ದಯಾಛತ್ರವಿದೆ. ನೀನು ಸ್ಥಾಪಿಸಿದ ಚಲುಕ್ಯವಂಶೀಯ ನರೇಂದ್ರರ ಪುರಸ್ಕಾರದಿಂದ ಕರ್ನಾಟಕದ ಭಾವೀ ಚರಿತ್ರೆ ತೇಜಸ್ವಿಯಾಗುವುದು. ಮಾಳವರು ಪರಾಜಯ ಹೊಂದುವರು. ಮುಂಜರಾಜನ ಪತನದ ಮೂಲಕ ಉತ್ತರಭಾರತದಲ್ಲಿ ಪ್ರಸ್ಥಾಪಿತವಾದ ಕರ್ನಾಟಕರ ವಿಜಯವು ಭಾವೀ ವಿಜಯ ಪರಂಪರೆಯ ಪ್ರಥಮ ಸೋಪಾನವಾಗುವುದು. ಮುಂಜರಾಜನನ್ನು ತೊರೆದು ನಿನ್ನನ್ನು ಆಶ್ರಯಿಸಿದ ಜಯಶ್ರೀ ವಿಜಯಶ್ರೀರೂಪದಿಂದ ರಾಜಿಸುತ್ತ ಬಹುಕಾಲ ನಿನ್ನ ಮನೆತನದಲ್ಲಿ ಬಾಳುವಳು. ಇಂದಿನ ನಿನ್ನ ಜಯಶ್ರೀ ನಿನ್ನ ಸಂತತಿಯವರು ಉತ್ತರಭಾರತದಲ್ಲಿ ನಡೆಸುವ ಭಾವೀ ದಂಡಯಾತ್ರೆಗಳಲ್ಲಿ ಹಲವಾರು ಜಯಶ್ರೀಗಳನ್ನು ಕರೆದುತರುವಳು. ಗೋದಾವರಿ ಕನ್ನಡನಾಡಿನ ಮುಂದಣ ಮೇಲ್ಮೆಯ ಮೊದಲುಮೆಟ್ಟಿಲಾಗುವಳು."

"ತಥಾಸ್ತು!"

ಗವಿಯ ಹಿಂಬದಿಯಿಂದ ಯಾರೋ ಉಚ್ಚರಿಸಿದಂತೆ ಈ ಶಬ್ದಗಳು ಪರಮಭಟ್ಟಾರಕನ ಕಿವಿಗೆ ಬಿದ್ದುವು.

ಪರಮಭಟ್ಟಾರಕನು ವಿನಮ್ರನಾಗಿ ಯೋಗಿರಾಜನಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು. ಯೋಗಿರಾಜನ ವರದ ಹಸ್ತವು ಕೆಳಗೆ ಸರಿದು ಬಂದು ಶ್ರೀಲನ ತಲೆಯ ಮೇಲೆ ಒಪ್ಪಿತು.



# ಪುರಾಣಿಕರ ಪುಸ್ತಕಗಳು

| | | |
|---|---|---|
| ರಾಮೂನ ಕತೆಗಳು | .... | ಒಂದೇ ವ್ಯಕ್ತಿಗೆ ಸಂಬಂಧಿಸಿದ ಒಂಬತ್ತು ಕತೆಗಳು. |
| ಸೈರಂಧ್ರಿ ಹಾಗೂ ಮಗನಗೆಲವು | .... | ಸರಳ ರಗಳೆಯಲ್ಲಿ ಬರೆದ ನಾಟಕಗಳು |
| ಬಾಳಕನಸು | .... | ಕವನ ಸಂಗ್ರಹ |
| ದೊರೆಸಾನಿ | .... | ಸರಳ ರಗಳೆಯಲ್ಲಿ ಬರೆದ ಕಾವ್ಯ ನಾಟಕ |
| ಮುಗಿಲಮಲ್ಲಿಗೆ | .... | ಕಾದಂಬರಿ |
| ಕೊನೆಯ ದಾರಿ | .... | ,, |
| ತೆರೆದ ಕಣ್ಣು | .... | ,, |
| ಮಂಜುಳಾ | .... | ,, |
| ಹೊಸಬಾಳು | .... | ,, |
| ರಾಧೇಯ | .... | ಸರಳ ರಗಳೆಯಲ್ಲಿ ಬರೆದ ಕಾವ್ಯನಾಟಕ |
| ಮದುವೆಯ ಆಟ | .... | ಮಕ್ಕಳ ಸಾಹಿತ್ಯ (ಕಥೆ-ನಾಟಕಗಳು) |

## ಅಚ್ಚಿನಲ್ಲಿ

| | | |
|---|---|---|
| ಹಬ್ಬಿದ ಬಳ್ಳಿ | .... | ಕಾದಂಬರಿ (ಪ್ರತಿಭಾ ಗ್ರಂಥಮಾಲೆಯಲ್ಲಿ) |

## ಬರಲಿವೆ

| | | |
|---|---|---|
| ಜೀವನಾದ | .... | ಕವನಸಂಗ್ರಹ |
| ಮುತ್ತೈದೆ | .... | ಕಾದಂಬರಿ |
| ಬಾಳಿನ ತೆರೆಗಳು | .... | ಕಥಾಸಂಗ್ರಹ. |

**ಸಾಹಿತ್ಯ ಸೇವಾಮಂದಿರ, ಗೋಕಾಕ.**

# ಸಾಹಿತ್ಯ ಸೇವಾ ಮಂದಿರ, ಗೋಕಾಕ.

## ಆಶ್ರಯದಾತರು :

ಶ್ರೀಮಂತ ಸರದಾರ ಬಿ. ಜಿ. ದೇಸಾಯಿ ಅವರು, ಕೌಜಲಗಿ.
,, ವೆಂಕಪ್ಪನವರು ಸಕ್ರಿ, ಬಾಗಲಕೋಟ.
ಶ್ರೀಮಾನ್ ಎಸ್. ಆರ್. ಪಾಟೀಲ, ವಕೀಲರು, ಗೋಕಾಕ.
ಸರಸ್ವತಿ ಸಂಘದ ಗೆಳೆಯರು, ಗೋಕಾಕ.

## ಸಹಾಯಕರು :

ಶ್ರೀಮಾನ್ ಅಪ್ಪಾಸಾಹೇಬ ದರಗಸೆಟ್ಟಿ, ಗೋಕಾಕ.
,, ಬಸವಣ್ಣೆಪ್ಪನವರು ಮುನ್ನೊಳ್ಳಿ, ,,
,, [illegible], ,,
,, ಎ. ಎಚ್. ಖೋಜಾ, ,,
,, ಇಷ್ಟಲಿಂಗಪ್ಪನವರು, ,,
,, ಅರ್ಜುನಸಾ, ಸಾತಪುತೆ, ,,